## ಜೀವನ್ ಮತ್ತು ಹನು ಈಗ

# ಮಾನವನ ಮಹತ್ವಪೂರ್ಣ ಸಾಧನೆಗಳನ್ನು ಸಾದರಪಡಿಸುತ್ತಾರೆ

ಪ್ರಪಂಚದಲ್ಲೇ ಅತ್ಯಂತ ಎತ್ತರವಾದ ಕಟ್ಟಡ ಎಂದರೆ ಚಿಕಾಗೋ ನಗರದಲ್ಲಿರುವ 'ಸೀಯರ್ಸ್ ಟವರ್': 110 ಮಹಡಿಗಳಿರುವ ಈ ಕಟ್ಟಡವು 1,454 ಅಡಿಗಳಷ್ಟು ಎತ್ತರಕ್ಕೆ ಎದ್ದುನಿಂತಿದೆ. ಅದರಲ್ಲಿರುವ 103 ಎಲಿವೇಟರ್‌ಗಳು ಮತ್ತು 9 ಎಸ್ಕಲೇಟರುಗಳು ಏಕಕಾಲದಲ್ಲಿ 16,700 ಜನರಿಗೆ ಸೇವೆ ಸಲ್ಲಿಸುತ್ತವೆ.

ಪ್ರಪಂಚದಲ್ಲೇ ಅತ್ಯಂತ ದೊಡ್ಡ ವಿಗ್ರಹ ಸೋವಿಯತ್ ರಷ್ಯಾ (ಯು. ಎಸ್. ಎಸ್. ಆರ್) ದಲ್ಲಿರುವ 'ಮದರ್‌ಲ್ಯಾಂಡ್' ('ತಾಯ್ನಾಡು'). 270 ಅಡಿ ಎತ್ತರವಿರುವ ಈ ವಿಗ್ರಹ ಕುತುಬ್ ಮೀನಾರ್‌ಗಿಂತ 18 ಅಡಿಗಳಷ್ಟು ಮಾತ್ರ ಚಿಕ್ಕದಾಗಿದೆ.

ಅಪೊಲೋ 13ರ ಚಾಲಕರು 1970ರಲ್ಲಿ ತಮ್ಮ ಆಕಾಶನೌಕೆಯನ್ನು ಚಂದ್ರನ ಇನ್ನೊಂದು ಮುಖದಲ್ಲಿ ಇಳಿಸಿದಾಗ ಮಾನವನು ಭೂಮಿಯಿಂದ ಅತ್ಯಂತ ದೂರದ ಪ್ರಯಾಣವನ್ನು: 2,48,665 ಮೈಲಿಗಳು: ಸಾಧಿಸಿದನು.

ಅತ್ಯಂತ ಆಳದ ಜಲಾಂತರ್ಗತ ಪ್ರಯಾಣ ಎಂದರೆ 1960 ರ ಪಿಕಾರ್ಡ್ ಮತ್ತು ವಾಲ್ಷ್‌ರದು. ಅವರು 15,820 ಅಡಿ ಆಳದಲ್ಲಿ ಸಾಗರದ ತಳವನ್ನು ತಲುಪಿದರು.

ಚಕ್ರಗಳ ಮೇಲೆ ಓಡುವ ಅತ್ಯಂತ ವೇಗವಾದ ಭೂಯಾನ ಎಂದರೆ 'ಬ್ಲೂ ಫ್ಲೇಮ್' ('ನೀಲ ಜ್ಯೋತಿ'). ಅದು 1970 ರಲ್ಲಿ ಯುತಾ ಪ್ರಾಂತದಲ್ಲಿನ ಬೊನೆವಿಲ್ಲೆ ಸಾಲ್ಟ್ ಫ್ಲಾಟ್ಸ್‌ನಲ್ಲಿ ಗಂಟೆಗೆ 650 ಮೈಲುಗಳ ವೇಗವನ್ನು ಮುಟ್ಟಿತು.

**ನಿಮ್ಮ ಹಿತಾಸಕ್ತಿಯ ರಕ್ಷಣೆಗೆ ಸುಭದ್ರ ಮತ್ತು ನಿಕರವಾದ ದಾರಿಯೇ ಜೀವ ವಿಮೆ. ಈ ಬಗ್ಗೆ ಕಂಡು ಹಿಡಿಯಿರಿ.**



ಭಾರತೀಯ
ಜೀವವಿಮಾ ನಿಗಮ

daCunha-LIC-100 KN

ಮುಂದೆ: ಈ ಈರ್ವರು ಶೋಧಕರು ಪ್ರಪಂಚದಲ್ಲಿನ ಮಾನವ ವೈಚಿತ್ರ್ಯಗಳನ್ನು ನಿಮಗೆ ಪರಿಚಯ ಮಾಡಿಕೊಡಲಿದ್ದಾರೆ.

# ಕಣ್ಣುಗಳನ್ನು ಮುಚ್ಚಿ ನಿಮಗೇನು ಬೇಕೆಂದು ನಿರ್ಧರಿಸಿ.



ಉಳಿತಾಯ ಮಾಡಿದರೆ ಬಯಕೆಗಳು ಈಡೇರುತ್ತವೆ. ಒಂದು ಸೈಕಲ್ಲೇ? ಒಂದು ಗೊಂಬೆಗಳ ಮನೆಯೋ? ಹೊಸ ಆಟದ ಸಾಮಾನೇ? ನಿಮ್ಮ ಹಣದಿಂದಲೇ ಖರೀದಿಸಬಹುದು. ಕೆನರಾ ಬ್ಯಾಂಕಿನ **ಬಾಲಕ್ಷೇಮ** ಠೇವಣಿ ಯೋಜನೆ ನಿಮಗಾಗಿ ಇದೆ. ಬೀಗದ ಕೈಯುಳ್ಳ ಸುಂದರವಾದ **ಬಾಲಕ್ಷೇಮ** ಉಳಿತಾಯ ಪೆಟ್ಟಿಗೆಯಲ್ಲಿ ನಾಣ್ಯಗಳ ಮೇಲೆ ನಾಣ್ಯಗಳನ್ನು ಶೇಖರಿಸಿ. ಪೆಟ್ಟಿಗೆ ತುಂಬಿದೊಡನೆ ಕೆನರಾ ಬ್ಯಾಂಕಿನಲ್ಲಿ ಜಮಾ ಮಾಡಿ ನಾಣ್ಯ ಸಂಗ್ರಹಣೆ ಪುನರಾರಂಭಿಸಿ. ನಾವೂ ಅದಕ್ಕೆ ಸೇರಿಸುವ ಕಾರಣ ನಿಮ್ಮ ಹಣ ಬೆಳೆಯುತ್ತದೆ. ಕೂಡಲೇ, ನಿಮಗೆ ಬೇಕಾದ್ದನ್ನು ಕೊಳ್ಳುವಷ್ಟು ದೊಡ್ಡದಾಗುತ್ತದೆ.

ನಿಮ್ಮ ಬಯಕೆ ಈಡೇರಲು ಎಂತಹ ಚಮತ್ಕಾರ! ಉಳಿತಾಯದ ಪಾಠಕ್ಕೆ ಎಂತಹ ಅದ್ಭುತ ಮಾರ್ಗ!

ಹೆಚ್ಚಿನ ವಿವರಗಳಿಗೆ ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆಗೆ ಭೇಟಿ ನೀಡಿ. **ಕಾಮಧೇನು**, **ವಿದ್ಯಾನಿಧಿ** ಮತ್ತು **ನಿರಂತರ** ನಮ್ಮ ಇತರ ವಿಶೇಷ ಯೋಜನೆಗಳು.




## ಬಾಲಕ್ಷೇಮ ಠೇವಣಿ ಯೋಜನೆ

## ಕೆನರಾ ಬ್ಯಾಂಕ್




(ಒಂದು ರಾಷ್ಟ್ರೀಕೃತ ಬ್ಯಾಂಕ್)

(ರಾಷ್ಟ್ರದಾದ್ಯಂತ)

1,200 ಕ್ಕೂ ಹೆಚ್ಚು ಶಾಖೆಗಳು

maa CB 4 Kan 80



# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

**ಮಾ**ನವರ ಜೀವನದಲ್ಲಿ ಎಲ್ಲರಿಗೂ ಬೇಕಾದುದು ಶಾಂತಿಯೇ. ಆದರೆ ಪ್ರತಿಯೊಬ್ಬರೂ ಅವರವರ ಶಾಂತಿ ಸುಖಗಳನ್ನೇ ಮುಖ್ಯವಾಗಿ ನೋಡುವುದರಿಂದಲೇ ಸಮಾಜದಲ್ಲಿ ಅಶಾಂತಿಯುಂಟಾಗಿ ಅದು ದೇಶವನ್ನು ವ್ಯಾಪಿಸುತ್ತದೆ. ಒಳ್ಳೆಯವರಾರು ಕೆಟ್ಟವರಾರು ಎಂಬುದೇ ತಿಳಿಯದಂತೆ ಎಲ್ಲರೂ ಒಳ್ಳೆಯವರಂತೆಯೇ ಕಾಣುತ್ತಾರೆ. ಒಳ್ಳೆಯವರನ್ನು ಸುಲಭದಲ್ಲಿ ತಿಳಿಯುವುದು ಸಾಧ್ಯವಿಲ್ಲ. ಈ ತತ್ವವನ್ನು ಅಡಗಿಸಿಕೊಂಡು ಈ ಸಂಚಿಕೆಯಲ್ಲಿ "ಪಾತಾಳ ರಾಕ್ಷಸ" ಎಂಬ ಒಂದು ಕಥೆ ಇದೆ.

## ಅಮರವಾಣಿ

**ಪಶ್ಯ ದಾನಸ್ಯ ಮಾಹಾತ್ಮ್ಯಂ ಸದ್ಯಃ ಪ್ರತ್ಯಯಕಾರಣಮ್**
**ಯತ್ರ ಭಾವಾದಪಿದ್ವೇಷೀ ಮಿತ್ರತಾಂ ಯಾತಿ ತತ್‌ಕ್ಷಣಾತ್**

ದಾನದ ಪ್ರಭಾವವು ಬಹಳ ದೊಡ್ಡದು. ಅದು ಕೂಡಲೇ ನಂಬುಗೆಯನ್ನುಂಟು ಮಾಡುತ್ತದೆ. ಕೇಳಿದುದನ್ನು ಕೊಟ್ಟ ತತ್‌ಕ್ಷಣದಲ್ಲಿ ಶತ್ರುವಾದರೂ ಮಿತ್ರನಾಗಿ ಬಿಡುತ್ತಾನೆ.

ಸಂಪುಟ : ೬೫ ನವಂಬರ್ '೮೦ ಸಂಚಿಕೆ : ೫

**ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦**









# ಪ್ರಶ್ನೋತ್ತರಗಳು

**ಎಂ. ಸುಕುಮಾರ್ ಜೈನ್, ಶಿವಮೊಗ್ಗ, (ಕರ್ನಾಟಕ)**

ಪ್ರ: ಪ್ರಳಯ ಕಾಲಬಂದಾಗ ಪ್ರಪಂಚವೆಲ್ಲಾ ಮುಳುಗಿ ಹೋಗುವುದೆಂದು ಪುರಾಣಗಳಲ್ಲಿರವುದಾಗಿ ಎಲ್ಲರೂ ಹೇಳುತ್ತಾರಲ್ಲವೆ? ಅಷ್ಟೊಂದು ನೀರು ಎಲ್ಲಿಂದ ಬರುತ್ತದೆ? ಹೇಗೆ ಬರುತ್ತದೆ? ಮಳೆಯಿಂದಲೋ ಸಮುದ್ರದಿಂದಲೋ?

ಉ: ಪ್ರಪಂಚದ ಮೇಲೆಲ್ಲಾ ಯುಗಾಂತದಲ್ಲಿ ಪ್ರಳಯ ಬರುವುದೆಂದು, ನೋವಾ, ಮನು ಮೊದಲಾದ ಪುರಾಣಗಳಲ್ಲಿ ಇರುವುದೇನೋ ನಿಜ. ಅದಕ್ಕೆ ಶಾಸ್ತ್ರೀಯವಾದ ಆಧಾರವೇನೂ ಇಲ್ಲ. ಆದರೂ ಪ್ರಳಯ ಬರುವ ಮಾತು ನಿಜವಾಗಿ ಬಿಟ್ಟ ಪಕ್ಷಕ್ಕೆ, ಪ್ರಪಂಚವೆಲ್ಲವನ್ನೂ ಮುಳುಗಿಸಲು ಸಾಕಾಗುವಷ್ಟು ನೀರು ಹಿಮಗಡ್ಡೆಯ ರೂಪದಲ್ಲಿ ಬಹಳ ಭಾಗ ದಕ್ಷಿಣ ಧ್ರುವದಲ್ಲಿಯೂ, ಸ್ವಲ್ಪ ಭಾಗ ಉತ್ತರ ಧ್ರುವ ಪ್ರಾಂತದಲ್ಲಿಯೂ ಇದೆ. ಸೂರ್ಯನ ಉಷ್ಣಾತಿರೇಕದಿಂದ ಕರಗಿ ಬಿಟ್ಟರೆ ಅದೇ ಪ್ರಪಂಚವನ್ನೆಲ್ಲಾ ಮುಳುಗಿಸಿಬಿಡಬಲ್ಲುದು.

**ಎನ್. ಸುರೇಶ್, ಅಲೆಪ್ಪೀ, (ಕೇರಳ)**

ಪ್ರ: ಅಣುಬಾಂಬು ವಿಷಯದಲ್ಲಿ ಎಲ್ಲರೂ ಹೆದರುತ್ತಿದ್ದಾರೆ. ಅಣುಬಾಂಬು ಸಿಡಿಯುವುದರಿಂದ ಉಂಟಾಗುವ ಫಲಿತ ಪರಿಣಾಮಗಳು ಏನು?

ಉ: ಅಣುಬಾಂಬು ಸಿಡಿದಾಗ ಧಾರ್ಮಿಕ ಶಕ್ತಿಯುಳ್ಳ ಸ್ವಲ್ಪ ಪದಾರ್ಥವು ಒಂದು ಶಕ್ತಿಯಾಗಿ ಮಾರ್ಪಡುತ್ತದೆ. ಪದಾರ್ಥವೆಂದರೆ ಅಪಾರವಾದ ಶಕ್ತಿಗೆ ಬರುವ ಒಂದು ಭೌತಿಕರೂಪ ಮಾತ್ರವೇ. ಆದುದರಿಂದ ಅಣುಬಾಂಬು ಸಿಡಿದಾಗ ಲಯವಾದ ಪದಾರ್ಥವೆಲ್ಲವೂ ಮಹಾ ಒತ್ತಡಕ್ಕೊಳಗಾಗಿ ಪ್ರಚಂಡ ಶಕ್ತಿಯಾಗಿ ಮಾರ್ಪಡುತ್ತದೆ. ಈ ಪದಾರ್ಥವು ಅನೇಕ ಕೋಟಿ ಡಿಗ್ರಿಗಳಷ್ಟು ಉಷ್ಣವಾಗಿ, ಅತ್ಯಂತ ಅಪಾಯಕರವಾದ ಗಾಮಾಕಿರಣ ಮೊದಲಾದುವುಗಳ ಪ್ರಸಾರದಿಂದ ಒಮ್ಮೆಗೇ ಹೊರಬಿದ್ದು ಸುತ್ತಲೂ ವೇಗವಾಗಿ ಧಾವಿಸುತ್ತದೆ. ಆ ಬಿಸಿ ತಗಲಿದ ಮೇರೆಯಲ್ಲಿ ಎಂತಹ ಘನ ಪದಾರ್ಥವಾದರೂ ಕರಗಿ ಹೋಗುತ್ತದೆ.

ಸಿಡಿದ ಪ್ರದೇಶಕ್ಕೆ ಸಮೀಪವಾಗಿದ್ದ ಪ್ರಾಣಿಗಳು ಕಿರಣ ಪ್ರಸಾರದ ಆಘಾತದಿಂದ ಹೇಳ ಹೆಸರಿಲ್ಲದೆ ಹೋಗುತ್ತವೆ. ದೂರದಲ್ಲಿದ್ದವರಿಗೆ ಕೂಡಾ ಲುಕೇಮಿಯಾದಂತಹ ಅಪಾಯಕಾರಿಯಾದ ವ್ಯಾಧಿಗಳುಂಟಾಗುತ್ತವೆ. ಮೇಲು ನೋಟಕ್ಕೆ ಏನೂ ಆಗಿಲ್ಲವೆಂದು ಕಾಣುವವರಿಗೆ ಕೂಡಾ "ರೇಡಿಯೇಷನ್" ಪ್ರಭಾವದಿಂದ ವಿಕಲಾಂಗಿಗಳಾದ ಮಕ್ಕಳು ಹುಟ್ಟಬಹುದು.

ಅಣು ಆಯುಧದಲ್ಲಿರುವ ಈ ಬಗೆಯ ದುಷ್ಫಲಿತವನ್ನೆಲ್ಲಾ ಅನುಭವಿಸಿವವರು, ಅಣುಬಾಂಬು ಸಿಡಿದು ಅದರ ರುಚಿಕಂಡವರು ಹಿರೋಷಿಮಾ, ನಗಸಾಕೀ ಎಂಬ ಜಪಾನು ನಗರವಾಸಿಗಳು. ಆದರೆ ಈಗ ಆ ಪಟ್ಟಣಗಳ ಮೇಲೆ ಬಿದ್ದ ಬಾಂಬುಗಳಿಗಿಂತ ಎಷ್ಟೋ ಹೆಚ್ಚು ಶಕ್ತಿ ತುಂಬಿದ ಅಣುಬಾಂಬುಗಳು ತಯಾರಾಗಿವೆ. ಆದುದರಿಂದಲೇ ಪ್ರಪಂಚದಲ್ಲೆಲ್ಲಾ ವಿವೇಕವಂತರು "ಅಣುಬಾಂಬು ನಿಷೇಧ" ವನ್ನು ಕೋರುತ್ತಿದ್ದಾರೆ.



## ೬೬

ಸರ್ವಜ್ಞ ಮಂತ್ರಿಯ ಮಾತಿಗೆ ಸೇನಾಪತಿ ಸಾರಸ ಪಕ್ಷಿ, "ನಮ್ಮ ಕೋಟೆ ಶತ್ರುಗಳ ದಾಳಿಯನ್ನು ತಡೆಯುವಷ್ಟು ಭದ್ರವಾಗಿಯೇ ಇದೆ. ಆಹಾರ ಧಾನ್ಯ ಗಳನ್ನೂ, ಉಪ್ಪನ್ನೂ ಸಂಗ್ರಹಿಸಿಟ್ಟರೆ ಸಾಕು. ಅವುಗಳಿಗೆಲ್ಲಾ ತಕ್ಕ ಏರ್ಪಾಡು ಮಾಡಿದ್ದೇನೆ. ಆ ವಿಷಯದಲ್ಲಿ ಹೆದರಬೇಕಾಗಿಲ್ಲ" ಎಂದಿತು.

ಅಷ್ಟರಲ್ಲಿ ಸಿಂಹಳ ದ್ವೀಪದ ರಾಜ ಮೇಘವರ್ಣ ಕಾಗೆ ಸಪರಿವಾರವಾಗಿ ಬಂದು ಹಿರಣ್ಯಗರ್ಭನನ್ನು ನೋಡಲು ಅಪೇಕ್ಷಿಸುವುದಾಗಿ ವಾರ್ತೆ ಬಂದಿತು.

"ಸಿಂಹಳ ದ್ವೀಪದ ರಾಜನು ತುಂಬಾ ವಿಶ್ವಾಸಿ; ಒಳ್ಳೆಯವನು. ಅವನನ್ನು ಗೌರವಿಸಬೇಕು. ವಿವೇಕ ವಂತನಾದ ಮೇಘವರ್ಣನನ್ನು ಕೂಡಲೇ ಇಲ್ಲಿಗೆ ಪ್ರವೇಶಗೊಳಿಸಿರಿ" ಎಂದಿತು ಹಿರಣ್ಯಗರ್ಭ ಹಂಸರಾಜ.

"ಅವನಿಗೆ ಯಾವ ರೀತಿಯಲ್ಲಿ ಸ್ವಾಗತ ಹೇಳ ಬೇಕು ? ಸ್ನೇಹಿತನೆಂತಲೋ? ಶತ್ರುವೆಂತಲೋ ? ತಟಸ್ಥನೆಂತಲೋ? " ಎಂದು ಸರ್ವಜ್ಞ ಮಂತ್ರಿ ಸಂಶಯದಿಂದ ಕೇಳಿತು.

"ಮೇಘವರ್ಣವು ನೆಲದ ಪಕ್ಷಿ. ಆ ಕಾರಣದಿಂದ ಚಿತ್ರವರ್ಣನ ಪಕ್ಷವೆಂದೇ ತಿಳಿಯಬೇಕು. ಒಂದುವೇಳೆ ಅದು ತನ್ನವರಾದ ಭೂಪಕ್ಷಿಗಳ ಸಂಪರ್ಕವನ್ನು ಬಿಟ್ಟು ಬಂದಿದ್ದರೆ, ದ್ರೋಹಿಯಾದ ಅದನ್ನು ಪ್ರಾಣ ದೊಂದಿಗೆ ಬಿಡಬಾರದು. ಸದ್ಯ ಅದು ಬಹಳ ದೂರ ದಿಂದ ಬಂದ ಕಾರಣದಿಂದ, ಗೌರವಕ್ಕೆ ಅರ್ಹನೆಂದೇ ಕೇಳಿರುವೆವಾದುದರಿಂದ ಸ್ನೇಹದಿಂದಲೇ ಒಳಗೆ ಪ್ರವೇಶಗೊಳಿಸಿರಿ" ಎಂದಿತು ಹಂಸರಾಜ ಹಿರಣ್ಯಗರ್ಭ.

"ಹಾಗೆಯೇ ಆಗಲಿ. ಕೋಟೆಯೂ ಭದ್ರವಾಗಿದೆ. ನಮ್ಮ ಚಾರರೂ ಎಚ್ಚರದಲ್ಲಿದ್ದಾರೆ. ಆದುದರಿಂದ ಗಿಳಿರಾಯಭಾರಿಯನ್ನು ಕೂಡಾ ಇಲ್ಲಿಗೆ ಕರೆಸಿ ಕೊಳ್ಳೋಣ. ಆದರೆ ಎಚ್ಚರ! ಚಾಣಕ್ಯನು ನಂದನನ್ನು ತನ್ನ ದೂತನ ಮೂಲಕ ಕೊಲ್ಲಿಸಿದ ಸಂಗತಿ ನಮಗೆ ಗೊತ್ತಿರುವುದರಿಂದ, ತಾವು ಆ ರಾಯಭಾರಿಗೆ ತಕ್ಕಷ್ಟು ದೂರದಲ್ಲಿ, ನಾಲ್ಕು ಸುತ್ತಲೂ ಕಣ್ಣಿಟ್ಟುಕೊಂಡು ಅಂಗರಕ್ಷಕರ ನಡುವೆ ಇರುವುದು ಒಳ್ಳೆಯದು" ಎಂದಿತು ಸರ್ವಜ್ಞ ಚಕೋರ ಮಂತ್ರಿ.



ಸಭೆಯೊಳಗೆ ಗಿಳಿರಾಯಭಾರಿಯನ್ನೂ, ಮೇಘವರ್ಣ ಕಾಗೆಯನ್ನೂ ಕರೆಯಿಸಿಕೊಂಡರು. ಗಿಳಿ ಬಗ್ಗಿ ಹಂಸರಾಜನಿಗೆ ನಮಸ್ಕಾರಮಾಡಿ, ತನಗಾಗಿ ಪ್ರತ್ಯೇಕಿಸಲ್ಪಟ್ಟ ಆಸನದಲ್ಲಿ ಕುಳಿತು ಗಂಭೀರವಾಗಿ ಸ್ಪಷ್ಟವಾಣಿಯಿಂದ ಹೀಗೆಂದಿತು :

"ಎಲೈ ಹಿರಣ್ಯಗರ್ಭಾ! ನಿನಗೆ ನಿನ್ನ ಪ್ರಾಣದ ಮೇಲೆ ಸ್ವಲ್ಪವಾದರೂ ಆಸೆ ಇದ್ದರೆ, ರಾಜ್ಯ ಬಿಟ್ಟು ಓಡಿಹೋಗುವ ಉದ್ದೇಶ ನಿನಗೆ ಇಲ್ಲದಿದ್ದರೆ, ನೀವೆಲ್ಲರೂ ಚಿರಕಾಲ ಬಾಳಬೇಕೆಂದು ಬಯಸುವಿರಾದರೆ ರಾಜಾಧಿರಾಜ ಮಹಾ ಬಲಶಾಲಿಯಾದ ಚಿತ್ರವರ್ಣನು, ಕೂಡಲೇ ನಿನ್ನನ್ನು ತನ್ನ ಬಳಿಗೆ ಬಂದು ಶರಣಾಗತನಾಗಬೇಕೆಂದು ಆಜ್ಞಾಪಿಸುತ್ತಾನೆ."

ಈ ಮಾತು ಕೇಳಿ ಹಿರಣ್ಯಗರ್ಭನು ಆವೇಶದಿಂದ, "ಏನು ಧೈರ್ಯ ಇವನಿಗೆ! ಇವನ ಬಾಯಿ ಮುಚ್ಚಿಸುವವರು ಈ ಸಭೆಯಲ್ಲಿ ಯಾರೂ ಇಲ್ಲವೇ?" ಎಂದು ಗಟ್ಟಿಯಾಗಿ ಕೂಗಿದನು.

ಕೂಡಲೇ ಮೇಘವರ್ಣ ಕಾಗೆ, "ಮಹಾರಾಜಾ, ತಮ್ಮ ಆಜ್ಞೆಯಾದರೆ ಈ ನೀಚನನ್ನು ಈಗಲೇ ಕೊಕ್ಕಿನಿಂದ ಸೀಳಿ ಕೊಲ್ಲುತ್ತೇನೆ" ಎಂದಿತು.

ಆಗ ಮಂತ್ರಿ ಚಕೋರವು, "ಮಹಾರಾಜಾ, ದೂತನು ತನ್ನ ರಾಜನಿಗೆ ಪ್ರತಿನಿಧಿ. ಅವನು ಎಷ್ಟೇ ಹೀನನಾದರೂ, ಎಷ್ಟು ಅಮರ್ಯಾದೆಯಿಂದ ಮಾತಾಡಿದರೂ ಅವನನ್ನು ಶಿಕ್ಷಿಸಬಾರದು. ತಾನು ಶಿಕ್ಷಾರ್ಹನಲ್ಲವೆಂಬ ಕಾರಣದಿಂದಲೇ ಅವನು ಇನ್ನಿಷ್ಟು ಅಮರ್ಯಾದೆಯಿಂದ ಮಾತಾಡುತ್ತಾನೆ. ಅದಾವುದೂ ಇವನ ಸ್ವಂತದ್ದು ಅಲ್ಲವೆಂದು ತಿಳಿಯೋಣ. ಅವನು ಸುಮ್ಮನೆ ಹಿಂದಿರುಗಿ ಹೋಗಲಿ." ಎಂದಿತು.

ಹಿರಣ್ಯಗರ್ಭವು ತನ್ನನ್ನು ತಾನೇ ನಿಗ್ರಹಿಸಿಕೊಂಡು, ಗಿಳಿಯನ್ನು ಹೋಗಲು ಬಿಟ್ಟಿತು. ಸರ್ವಜ್ಞ ಚಕೋರವು ಗಿಳಿಯನ್ನು ದೂರ ಕರೆದೊಯ್ದು, ಸಂಪ್ರದಾಯದಂತೆ ಅದಕ್ಕೆ ಕೊಡಬೇಕಾದ ಬಂಗಾರವನ್ನೂ, ಇತರ ಬಹುಮಾನಗಳನ್ನೂ ಕೊಟ್ಟು ಕಳುಹಿಸಿ ಕೊಟ್ಟಿತು.

ಹಾಗೆ ಹಿಂದಿರುಗಿ ಬಂದ ಗಿಳಿಯನ್ನು ನೋಡಿ, ನವಿಲುರಾಜ ಚಿತ್ರವರ್ಣನು "ವಿಶೇಷವೇನು?" ಎಂದು ಕೇಳಿತು.

"ಮಹಾರಾಜಾ! ಯುದ್ಧ ಸನ್ನಾಹ ನಡೆಸಿರಿ. ಕರ್ಪೂರದೇಶವು ಭೂಲೋಕ ಸ್ವರ್ಗವೆನ್ನಲು ಸಂದೇಹವಿಲ್ಲ. ಅದು ತುಂಬಾ ಬಲವಿರುವ ದೇಶವೂ ಹೌದು. ಅಲ್ಲಿಯ ರಾಜ ಹಿರಣ್ಯಗರ್ಭನೂ, ಮಂತ್ರಿ ಸರ್ವಜ್ಞನೂ ನಿಮ್ಮ ಸಾರ್ವಭೌಮತೆಗೆ ಒಪ್ಪದೆ, ನನ್ನ ರಾಯಭಾರವನ್ನು ನಿರಾಕರಿಸಿದ್ದಾರೆ. ಇನ್ನು ಶಾಂತಿಯ ಮಾತುಕತೆಗಳಿಗೆ ಸ್ವಲ್ಪವೂ ಅವಕಾಶವಿಲ್ಲ. ಯುದ್ಧವೇ ಸರಿ!" ಎಂದಿತು ಗಿಳಿರಾಯಭಾರಿ.

ಯುದ್ಧವು ತಪ್ಪದೆ ಬಂದುದರಿಂದ ಚಿತ್ರವರ್ಣ ರಾಜನು ತನ್ನ ಮಂತ್ರಿಗಳೊಂದಿಗೆ ಕರ್ತವ್ಯವನ್ನು ಕುರಿತು ಚರ್ಚಿಸ ತೊಡಗಿದನು. ದೂರದರ್ಶಿನಿ

ಹದ್ದು ಮಂತ್ರಿ, "ಇನ್ನಾದರೂ ತಪ್ಪದ ಸರಿಯೆನಿಸಿದರೆ ಮಾತ್ರ ಯುದ್ಧಕ್ಕೆ ತೊಡಗಬೇಕು. ಯುದ್ಧವು ತಪ್ಪಲು ಚಿಕ್ಕ ಚಿಕ್ಕ ರಾಜಿಯ ಮಾರ್ಗ ಹುಡುಕಬೇಕು. ದುಡುಕಿ ಒಮ್ಮೆಗೇ ಹೊಡೆದಾಟಕ್ಕೆ ಇಳಿಯಬಾರದು. ಒಳ್ಳೆಯ ಯೋಧರಿರುವ ಚಿಕ್ಕ ಸೇನೆಯಾದರೂ, ಅಂಜುಕುಳಿಗಳೂ, ಒಳ್ಳೆಯ ಶಿಕ್ಷಣವಿಲ್ಲದವರೂ ತುಂಬಿದ ದೊಡ್ಡ ಸೇನೆಗಿಂತಲೂ ಎಷ್ಟೋ ಮೇಲು. ಹೇಡಿಗಳ ಓಟವು ಒಳ್ಳೆಯವರ ಸೋಲಿಗೆ ಕಾರಣವಾಗುತ್ತದೆ. ಕೀರ್ತಿಯೂ ಸನ್ಮಾನವೂ ವೀರತ್ವವನ್ನು ಪ್ರೋತ್ಸಾಹಿಸುತ್ತವೆ. ಎಲ್ಲಾ ವಿಷಯ ಚೆನ್ನಾಗಿ ಯೋಚಿಸಬೇಕು. ಯುದ್ಧ ಬಂತೆಂದು ನಂಬಿಬಿಡಬಾರದು." ಎಂದು ಹೇಳಿತು.

ನವಿಲು ರಾಜ ಬೇಸರದಿಂದ, "ಸುಮ್ಮನೆ ಬಾಯಿ ತುರಿಸಿಕೊಳ್ಳುವುದೇಕೆ ಬಿಡು! ಮೀನಮೇಷ ನೋಡುವ ಕಾಲ ಮೀರಿತು. ನಾವು ಕೂಡಲೇ ದಂಡಯಾತ್ರೆ ಹೊರಡೋಣ!" ಎಂದು ಎದ್ದು, ಈ ಮೊದಲೇ ಜ್ಯೋತಿಷ್ಕರು ನಿಶ್ಚಯಿಸಿದ್ದ ಮುಹೂರ್ತದಲ್ಲಿ ಸೈನ್ಯದೊಂದಿಗೆ ಸಹಾ ಹೊರಟಿತು.

ಚಿತ್ರವರ್ಣವು ತಮ್ಮ ಮೇಲೆ ದಂಡೆತ್ತಿ ಬಂದು ಮಲಯ ಪರ್ವತದ ಮೇಲೆ ಬೀಡು ಬಿಟ್ಟಿರುವುದೆಂದು ಹಿರಣ್ಯಗರ್ಭ ಹಂಸರಾಜನಿಗೆ ವಾರ್ತೆ ಹೋಯಿತು.

ಅದರೊಂದಿಗೆ ಚಿತ್ರವರ್ಣನ ಗೂಢಚಾರಿಯೊಬ್ಬನು ತಮ್ಮ ಕೋಟೆಯೊಳಗಿರುವಂತೆ ಸೂಚನೆಗಳು ತೋರಿಬಂದುವು. ಆದುದರಿಂದ ಮೊದಲು ಹಿರಣ್ಯಗರ್ಭನು ಕೋಟೆಯೊಳಗೆಲ್ಲಾ ಶೋಧನೆ ನಡೆಸಿದನು. ಯಾರೂ ಸಿಕ್ಕಿ ಬೀಳಲಿಲ್ಲ.

ಆದರೆ ಸರ್ವಜ್ಞ ಮಂತ್ರಿಗೆ ಮೇಘವರ್ಣ ಕಾಗೆಯ ಮೇಲೆ ಅನುಮಾನ ಉಂಟಾಯಿತು. ಅದನ್ನು ತಿಳಿದು ಹಿರಣ್ಯಗರ್ಭವು, "ಮೇಘವರ್ಣನು ಪರಕೀಯನಾದ ಮಾತ್ರಕ್ಕೆ ಸಂದೇಹ ತಾಳುವುದು ಸರಿಯಲ್ಲ. ಅವನು



ಶತ್ರುವಿನ ಗೂಢಚಾರಿಯಾಗಿದ್ದರೆ ಗಿಳಿದೂತನನ್ನು ಕೊಲ್ಲಲಿಕ್ಕೆ ಸಿದ್ಧನಾಗುತ್ತಿದ್ದನೆ? ಅದೂ ಅಲ್ಲದೆ ಯುದ್ಧ ನಿರ್ಣಯವಾಗುವುದಕ್ಕೆ ಮೊದಲೇ ಅವನು ನಮ್ಮ ಬಳಿಗೆ ಬಂದಿದ್ದಾನೆ. ಸುಮ್ಮನೇ ಸಂದೇಹ ತಾಳಬಾರದು" ಎಂದಿತು.

"ಆದರೂ ಅವನು ಹೊರಗಿನಿಂದ ಬಂದವನು. ವಿನಯದ ಮಾತುಗಳನ್ನು ನೋಡಿ ನಂಬುವುದು ಒಳ್ಳೆಯದಲ್ಲ. ಎಚ್ಚರದಲ್ಲಿರುವುದರಿಂದ ತಪ್ಪೇನಿಲ್ಲವಷ್ಟೇ" ಎಂದನು ಸರ್ವಜ್ಞ ಮಂತ್ರಿ ಚಕೋರ.

"ಹೊರಗಿನಿಂದ ಬಂದವನಾದ ಮಾತ್ರಕ್ಕೆ ಸಂದೇಹಿಸಬೇಕಾದ ಅಗತ್ಯವಿಲ್ಲ. ಒಳಗಿನವರ ಹಾಗೆಯೇ ಹೊರಗಿನವರಲ್ಲಿಯೂ ಒಳ್ಳೆಯವರೂ ಕೆಟ್ಟವರೂ ಎರಡೂ ಅಲ್ಲದವರೂ ಇರುತ್ತಾರೆ" ಎಂದನು ಹಂಸರಾಜ.

"ಆದರೆ ಮಂತ್ರಿ ಎಂದ ಮೇಲೆ ತನ್ನ ಅಭಿಪ್ರಾಯ ತಿಳಿಸಬೇಕಾದುದೇ ಧರ್ಮ. ರಾಜನ ಹತ್ತಿರ ನಿಜವನ್ನು

ಮರೆಸುವ ವೈದ್ಯನೂ, ಪುರೋಹಿತನೂ, ಮಂತ್ರಿಯೂ ರಾಜನ ಆರೋಗ್ಯಕ್ಕೂ, ನೀತಿಗೂ, ಸೌಭಾಗ್ಯಕ್ಕೂ ಹಾನಿಕಾರಕರಾಗುತ್ತಾರೆ. ಆದಕ್ಕೇ ಮನಸ್ಸಿಗೆ ತೋರಿದ್ದನ್ನು ಹೇಳಿದೆನು " ಎಂದನು ಸರ್ವಜ್ಞ.

" ಈಗ ಏನು ಮಾಡಬೇಕು? ಚಿತ್ರವರ್ಣನು ತನ್ನ ಮಂತ್ರಿಯಾದ ಹದ್ದಿನ ಸಲಹೆಯನ್ನು ನಿರಾಕರಿಸಿ ನಮ್ಮ ಮೇಲೆ ದಂಡೆತ್ತಿ ಬಂದಿರುವನೆಂದು ಚಾರರ ಮೂಲಕ ತಿಳಿದಿದೆ. ಈಗ ಶುತ್ರು ಸೈನ್ಯವು ಪ್ರಯಾಣದಿಂದ ಬಳಲಿಕೊಂಡಿದೆ. ಅವುಗಳಿಗೆ ಇಲ್ಲಿಯ ಪ್ರದೇಶಗಳೂ, ನದಿಗಳೂ, ಗುಡ್ಡ ಬೆಟ್ಟಗಳೂ ತಿಳಿಯವು. ನಾವು ಅವುಗಳ ಮೇಲೆ ಬೀಳಲು ಇದೇ ಒಳ್ಳೇ ಸಮಯ " ಎಂದನು ರಾಜ.

ಹಂಸರಾಜನ ಪಕ್ಷಿಸೇನೆ ಚತ್ರವರ್ಣನ ಪಕ್ಷಿಸೇನೆಯ ಮೇಲೆ ಒಮ್ಮೆಗೇ ದಾಳಿಮಾಡಿತು. ಚಿತ್ರವರ್ಣನ ಸೇನೆಗಳು ಕಾಡುಗಳಲ್ಲಿಯೂ, ಗುಡ್ಡಗಳ ಕಣಿವೆಗಳಲ್ಲಿಯೂ, ದಾರಿಗಳಲ್ಲಿಯೂ ಬಿದ್ದು ಬಹಳವಾಗಿ ನಾಶವಾದುವು.

ಸೋತುಹೋದ ಚಿತ್ರವರ್ಣನು ಹದ್ದು ಮಂತ್ರಿ ದೂರದರ್ಶನನೊಂದಿಗೆ ಆಲೋಚನೆ ಕೇಳಿದನು. ಅವಸರಪಟ್ಟು ಯುದ್ಧಕ್ಕೆ ತಲೆ ಹಾಕಿದುದನ್ನು ದೂರದರ್ಶನನು ನಿಂದಿಸಿದನು. " ಆದರೂ ನಿರಾಶೆಪಡಬೇಡ. ನಮ್ಮ ಸೇನೆಯನ್ನೆಲ್ಲಾ ಒಟ್ಟುಗೂಡಿಸು." ಎಂದು ಹೇಳಿದನು ಹದ್ದು ಮಂತ್ರಿ.

ಹಾಗೆಯೇ ಚಿತ್ರವರ್ಣನು ಚೆದರಿದ ಎಲ್ಲಾ ಸೇನೆಗಳನ್ನೂ ಒಟ್ಟು ಗೂಡಿಸಿತು. ಈ ಸಂಗತಿ ಕೊಕ್ಕರೆ ಚಾರನ ಮೂಲಕವಾಗಿ ಹಿರಣ್ಯಗರ್ಭ ರಾಜ ಹಂಸಕ್ಕೆ ಗೊತ್ತಾಯಿತು. ಆಗ ಸರ್ವಜ್ಞನು ಹಿರಣ್ಯಗರ್ಭನೊಂದಿಗೆ, " ಮೊದಲು ಕೋಟೆಯನ್ನು ಭದ್ರಪಡಿಸು. ಖರ್ಚು ನೋಡದೆ ಸೈನಿಕರಿಗೆ ಬೇಕಾದಷ್ಟು ಧನವನ್ನು ಕೊಟ್ಟು ಅವರು ಕೋಟೆಯನ್ನು ಕಾಪಾಡುವಂತೆ ಮಾಡು. ಇನ್ನು ಶತ್ರು ನೆಟ್ಟಗೆ ಕೋಟೆಗೇ ಬಂದು ಬೀಳುತ್ತಾನೆ " ಎಂದಿತು.

ತಾನು ಕೋಟೆಯಿಂದ ಹೊರಗೆ ಹೋಗಿ ಶತ್ರುವಿನೊಂದಿಗೆ ಕಲೆ ಬೀಳುವೆನೆಂದು ಮೇಘವರ್ಣ ಕಾಗೆ ಹೇಳಿತು. ಅದಕ್ಕೆ ಸರ್ವಜ್ಞನು ಒಪ್ಪದೆ, ಎಲ್ಲರೂ ಕೋಟೆಯೊಳಗಿದ್ದೇ ರಕ್ಷಿಸಬೇಕೆಂದು ಹೇಳಿದನು.

ಆದರಂತೆ ಚಿತ್ರವರ್ಣನ ಸೇನೆಗಳು ಕೋಟೆಯನ್ನು ಮುತ್ತಿಗೆ ಹಾಕಿದಾಗ, ಕೋಟೆಯ ನಾಲ್ಕು ಸುತ್ತಲಿನ ದ್ವಾರಗಳ ಬಳಿಯಲ್ಲಿಯೂ ತೀವ್ರ ಹೋರಾಟಗಳು ತೊಡಗಿದವು. ಹಿರಣ್ಯಗರ್ಭನ ಸೈನಿಕರು ತೀವ್ರವಾಗಿ ಹೋರಾಡುತ್ತಿರಲು, ಮೇಘವರ್ಣ ಕಾಗೆಯೂ ಇತರ ಕಾಗೆಗಳೂ ಕೋಟೆಯೊಳಗಿನ ಮನೆಗಳ ಮೇಲೆ ಉರಿಯುವ ಕೊಳ್ಳಿಗಳನ್ನು ಹಾಕಿ, " ಬೆಂಕಿ! ಬೆಂಕಿ! ಕೋಟೆ ವಶವಾಗಿಹೋಯಿತು!" ಎಂದು ದೊಡ್ಡದಾಗಿ ಕೂಗು ಹಾಕಿದವು.






೬

[ಸೇನಾಧಿಪತಿ ಸಮರಸೇನನೂ, ಸೈನಿಕರೂ ಅರಣ್ಯದಲ್ಲಿ ಮಹಾ ಮಾಂತ್ರಿಕ ಚತುರ್ನೇತ್ರನ ಕಣ್ಣಿಗೆ ಬಿದ್ದರು. ಅವನು ಅವರೊಂದಿಗೆ ಮಾತಾಡುವಾಗಲೇ ಅವನ ಶತ್ರು ಏಕಾಕ್ಷಿ ಮಾಂತ್ರಿಕನು ಬಂದನು. ಅವರಿಬ್ಬರೂ ಯುದ್ಧ ಮಾಡುತ್ತಿದ್ದಾಗ, ಚತುರ್ನೇತ್ರನು ಮಾಯವಾದನು. ಏಕಾಕ್ಷಿಯೂ ಹೊರಟು ಹೋದನು. ಅಷ್ಟರಲ್ಲಿ ಸಮೀಪ ದಲ್ಲಿದ್ದ ಅಗ್ನಿಪರ್ವತವು ಸಿಡಿಯಿತು]

ಅಕಸ್ಮಾತ್ತಾಗಿ ಸಿಡಿದುಕ್ಕಿ ಚಿಮ್ಮುವ ಅಗ್ನಿಪರ್ವತ ವನ್ನು ನೋಡಿ, ಸಮರಸೇನನೂ ಸೈನಿಕರೂ ಭಯ ಭ್ರಾಂತರಾದರು. ಅಗ್ನಿಪರ್ವತದಿಂದ ಮುದ್ದೆ ಮುದ್ದೆ ಯಾಗಿ, ಕೆಂಗರಿಬಣ್ಣದ ಹೊಗೆಯೂ, ಅದರೊಳಗಿ ನಿಂದ ಅಡಿಗಡಿಗೆ ಚಿಮ್ಮುವ ಬೆಂಕಿಯ ಕೆನ್ನಾಲಗೆ ಗಳಂತಹ ಜ್ವಾಲೆಗಳೂ, ಕಣ್ಣುಗಳನ್ನು ಚುಚ್ಚುವಂತೆ ಚಿಮ್ಮುವ ಕಿಡಿರಾಶಿಗಳೂ ಅವರನ್ನು ಎತ್ತಲೂ ಕದಲ ದಂತೆ ನಿಲ್ಲಿಸಿ ಬಿಟ್ಟುವು. ಬರಬರುತ್ತ ಆ ಸುತ್ತು ಮುತ್ತಲಿನ ಪ್ರದೇಶವೆಲ್ಲಾ ಹೊಗೆಯಿಂದ ತುಂಬಿ ಹೋಯಿತು. ಬಡಬಡಿಕೆ ಗುಡುಗುಡಿಕೆ ಶಬ್ದಗಳೂ, ಭೋರೆಂಬ ಎಲ್ಲೆಲ್ಲಿಯ ಮೃಗಪಕ್ಷಿಗಳ ಆರ್ತಾಲಾಪವೂ ಒಟ್ಟು ಸೇರಿ ಯಾವುದೋ ಪ್ರಳಯವಾಗುವಂತೆ ತೋರುತಿತ್ತು.

ಸಮರಸೇನನು ಹೋಗಬೇಕಾಗಿದ್ದ ದಿಕ್ಕಿನಲ್ಲಿಯೇ ಅಗ್ನಿಪರ್ವತದ ಜ್ವಾಲಾ ಮುಖ ಸಿಡಿಯಬೇಕೆ? ಧೀರ ಸಮರಸೇನನು ಕುಂಡಲಿನೀ ದೇವಿಯನ್ನು ನೆನೆದನು. ಇಲ್ಲಿ ಮಂತ್ರವಾದಿಗಳ ಗೊಡವೆಯಿಂದ ತಾವು ತಡ ಮಾಡಿದುದರಿಂದಲೇ ಬದುಕಿ ಉಳಿ ದಿರುವೆವೆನಿಸಿತು. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ತಾವೆಲ್ಲಾ ಆ ಜ್ವಾಲಾಮುಖೀ ಬೆಟ್ಟದ ಸಮೀಪದಲ್ಲಿದ್ದು




ಕರಟಿ ಸಾಯುತಿದ್ದೆವಲ್ಲಾ ! ಅಂತೂ ಬದುಕಿ ಉಳಿದಿರುವ ತಾವು ಇನ್ನು ಮೂಡುತೀರವನ್ನು ಸೇರುವ ಬಗೆ ಹೇಗೆ ? ಅದಕ್ಕೆ ಬೇರೆದಾರಿಯೇ ಹಿಡಿಯಬೇಕಾಯಿತು. ಅಂತಲೇ ಸಮರಸೇನನು, ಮಾತಾಡುವ ಶಕ್ತಿಯನ್ನು ಕಳೆದುಕೊಂಡವನಂತೆ ಹಿಂದಿರುಗಿ ನಡೆಯಲಾರಂಭಿಸಿದನು. ಅವನ ಜತೆಗಾರರಾದ ಸೈನಿಕರು ಕೂಡಾ ಭಯ ಕಂಪಿತರಾಗಿ ಯಾವ ಮಾತೂ ಆಡದೆ ಅವನ ಹಿಂದೆಯೇ ಕಾಲುತೆಗೆದಿಡ ತೊಡಗಿದರು. ಅವರು ಈಗ ತಮಗರಿಯದಂತೆಯೇ ಪಶ್ಚಿಮದಿಕ್ಕನ್ನು ಹಿಡಿದು ನಡೆಯುತ್ತಿದ್ದರು. ಅಗ್ನಿ ಪರ್ವತದಿಂದ ಹೊರಡುವ ಘಾತಗಳಿಂದ ತಪ್ಪಿಸಿಕೊಳ್ಳಲು ಆ ದಿಕ್ಕೇ ಶರಣ್ಯವಾಗಿತ್ತು. ಸ್ವಲ್ಪದೂರ ನಡೆಯುವಾಗ, ಸಮರಸೇನನಿಗೆ. ತಾವು ನಡೆಯುವ ದಿಕ್ಕು ಗೊತ್ತಾದರೂ, ಆಚೆಗೋ ಈಚೆಗೋ ತಿರುಗುವ ಗೊಡವೆಗೆ ಹೋಗಲಿಲ್ಲ. ಮೂಡು ಬದಿಯಲ್ಲಿ ತಾವು ಬಿಟ್ಟು ಬಂದ ಹಡಗುಗಳಿಗೆ ಇನ್ನಿಷ್ಟು ದೂರವಾಗುವುದನ್ನು ನೆನೆದು ಸಮರಸೇನನು ಕಸಿವಿಸಿಗೊಂಡನು. ಬೇರೆ ದಿಕ್ಕುಗಳೆಲ್ಲವೂ ಹೊಗೆಯಿಂದ ಕಪ್ಪು ಕಪ್ಪಾಗಿದ್ದುವು. ಈ ಸಂದರ್ಭದಲ್ಲಿ ಮಾಂತ್ರಿಕರು ಮತ್ತೆ ತಗಲಿದರೆ ಏನುಗತಿಯೋ ? ಅದರ ಮೇಲೆ ಹೆದರಿ ಓಡುತ್ತಿರುವ ಕ್ರೂರ ಮೃಗಗಳ ಭಯಬೇರೆ ! ಅಂತೂ ತಮ್ಮ ಹಡಗುಗಳ ಬಳಿಗೆ ಹೋಗಿ ಸೇರುವ ಆಶೆ ತಪ್ಪಿದಂತೆಯೇ ಸರಿ! ಜ್ವಾಲಾಮುಖಿಯ ಘಾತದಿಂದ ಸಮುದ್ರವೂ ಉಕ್ಕಿ, ಹಡಗುಗಳನ್ನು ಎತ್ತಾದರೂ ಒಯ್ದರೂ ಒಯ್ದಿರಬಹುದು. ಹಾಗಾಗದಿರಲಿ !

ದಾರಿಯಾದರೂ ಎಲ್ಲಿದೆ ? ಗುಂಪುಗುಂಪಾಗಿ ಬೆಳೆದ ಮರಗಿಡಪೊದರುಗಳ ನಡುವೆ ದಾರಿ ಮಾಡಿಕೊಂಡು ನಡೆಯುತ್ತಿದ್ದರು. ಅಲ್ಲಲ್ಲಿ ಹಳ್ಳ ಪ್ರಾಂತಗಳಿಗೆ ಜ್ವಾಲಾಮುಖಿಯೊಳಗಿನಿಂದ ಕಲ್ಲುಗಳು ಕರಗಿದ ಲಾವಾರಸವು ಬಿಸಿಬಿಸಿ ಹೊಗೆಯನ್ನು ಕಾರಿಕೊಂಡು ಪ್ರವಹಿಸುವುದು ಕಾಣುತ್ತಿತ್ತು. ನಿರ್ಭಾಗ್ಯ ಮೃಗ ಪಕ್ಷಿಗಳು ಅದಕ್ಕೆ ಬಲಿಯಾಗುತ್ತಿದ್ದುವು. ಜೀವ ಉಳಿಸಿಕೊಂಡ ಮೃಗಗಳು ಅರಚುತ್ತ ಕಿರುಚುತ್ತ ಓಡುತ್ತಿದ್ದುವು.

ಒಂದು ಕಡೆಯಲ್ಲಿ ಅವಸರದ ಅಪಾಯವನ್ನು ದಾಟಿ ಬಂದಂತೆನಿಸಿ ಸಮರಸೇನನು ನಿಂತು ಸುತ್ತಲೂ ನೋಡಿದನು. ದೂರದಿಂದ ಉಕ್ಕಿಬರುವ ಸಳಸಳನೆ ಕುದಿಯುವ ದ್ರವವು ದಾಟಲು ಅಸಾಧ್ಯವಾದ ನದಿಯಾಗುವುದಕ್ಕೆ ಮೊದಲೇ ಯಾವುದಾದರೊಂದು ಎತ್ತರವಾದ ಪ್ರದೇಶವನ್ನು ಸೇರುವುದು ಒಳ್ಳೆಯುದೆಂದು ಅವನಿಗೆ ತೋರಿತು. ಇಲ್ಲದಿದ್ದರೆ ಶಿಲಾದ್ರವವು ತಮ್ಮನ್ನು ಮುಳುಗಿಸಬಹುದು. ಅಥವಾ ಹುಚ್ಚು ಭಯದಿಂದ ಓಡುವ ಕ್ರೂರ ಮೃಗಗಳು ತಮ್ಮನ್ನು ಸೀಳಿಹಾಕಲೂ ಬಹುದು.

ಸಮರಸೇನನು ಸೈನಿಕರಿಗೆ ಧೈರ್ಯವನ್ನು ಹೇಳುತ್ತ, ಮತ್ತೆ ನಡೆಯಲಾರಂಭಿಸಿದನು. ಇನ್ನಿಷ್ಟು

ಮುಂದೆ ಹೋಗಲು ಒಂದು ವಿಚಿತ್ರ ದೃಶ್ಯವನ್ನು ನೋಡಿ ಗಕ್ಕನೆ ನಿಂತನು. ಇದು ನಿಜವೋ ಎಂಬ ಭ್ರಮೆಯಿಂದ ಕಣ್ಣನ್ನು ತಿಕ್ಕಿಕೊಂಡು ಮತ್ತೆ ಎರಡಡಿ ಮುಂದಿಟ್ಟನು. ತಾನು ನೋಡುವುದು ನಿಜವೇ ಎಂದು ಖಂಡಿತವಾಯಿತು.

ಸಮರಸೇನನು ನಿಂತು ಸೈನಿಕರಿಗೂ ಎಚ್ಚರಿಕೆ ಕೊಟ್ಟನು. ಇದಿರಿನಲ್ಲಿ ಕಾಣುವ ಒಂದು ಮರದ ಕೊಂಬೆಯಲ್ಲಿ ಒಬ್ಬ ಮನುಷ್ಯನನ್ನು ತಲೆಕೆಳಗಾಗಿ ನೇತಾಡ ಕಟ್ಟಿದ್ದರು. ಅವನಲ್ಲಿ ಪ್ರಾಣವಿದೆಯೋ ಇಲ್ಲವೋ ತಿಳಿಯದು. ಕೈಗಳನ್ನೂ ಕಾಲುಗಳನ್ನೂ ಬಳ್ಳಿಗಳಿಂದ ಕಟ್ಟಲಾಗಿತ್ತು. ಅವನ ಮುಖಲಕ್ಷಣ ನೋಡಿದರೆ, ಅವನು ಅಡವಿ ಜಾತಿಯವನೆಂದು ಸ್ಪಷ್ಟವಾಗುತಿತ್ತು.

ಸಮರಸೇನನೂ ಅವನ ಜತೆಯ ಸೈನಿಕರೂ ಆ ವಿಚಿತ್ರ ದೃಶ್ಯವನ್ನು ನೋಡಿ ನಿಶ್ಚೇಷ್ಟಿತರಾದರು. ಈ ಮಾಂತ್ರಿಕ ದ್ವೀಪದಲ್ಲಿ ಕ್ರೂರ ಮೃಗಗಳೂ, ಮಾಂತ್ರಿಕರೂ ಮಾತ್ರವಲ್ಲದೆ, ಸಾಧಾರಣ ಮನುಷ್ಯರು ಕೂಡಾ ಇದ್ದಾರೆಂದಾಯಿತು. "ಈ ಕಾಡು ಮನುಷ್ಯನಿಗೆ ಇಷ್ಟೊಂದು ಕಠಿಣವಾದ ಶಿಕ್ಷೆ ಕೊಟ್ಟವರು ಯಾರೋ? ಏಕೋ? ಇವನ ಗತಿ ಹೀಗಾಗಲು ಕಾರಣವೇನು? ಇಲ್ಲಿ ಕೂಡಾ ಒಂದು ನ್ಯಾಯವೂ ವಿಚಾರಣೆಯೂ ಶಿಕ್ಷೆಯೂ ಇದೆಯೆಂದು ತೋರುತ್ತದೆ. ರಾಜಶಾಸನದ ಹಾಗೆ ಏನೋ ಒಂದು ಇದೆಯೆಂದಾಯಿತು." ಎಂದು ತನಗೆತಾನೇ ಹೇಳಿ ಕೊಂಡನು ಸಮರಸೇನ.

ಸೈನಿಕರಿಗೇನು ಗೊತ್ತು ಪಾಪ? ಏನೂ ಮಾತಾಡದೆ ಸುಮ್ಮನೆ ಪಿಳಿಪಿಳಿ ನೋಡಿದರು. ಆಗ ಸಮರಸೇನನೇ ಹೇಳಿದನು: "ಇವನನ್ನು ನೋಡಿದರೆ ಕಾಡು ಜಾತಿ ಮನುಷ್ಯನಂತೆ ಕಾಣುತ್ತಾನೆ. ಅಂದ ಮೇಲೆ ಈ ಜಾತಿ ಮನುಷ್ಯರ ನಿವಾಸ ಸ್ಥಾನ ಇಲ್ಲೆಲ್ಲೋ ಇರಲೇಬೇಕು. ಅದನ್ನು ತಿಳಿದುಕೊಳ್ಳ






ದನ್ನು ನೋಡಿ ಸಮರಸೇನನು ಮತ್ತೇನೂ ಹೇಳ ಲಾಗದೆ ಹೋದನು. ಅವರ ಮನಸ್ಸಿನಲ್ಲಿರುವುದು ಅವನಿಗೆ ಗೊತ್ತಾಗದಿರಲಿಲ್ಲ. ಅವನಿಗಾದರೂ ಬೇಗನೇ ಪೂರ್ವ ತೀರಕ್ಕೆ ಹೋಗಬೇಕೆಂತಲೇ ಇದ್ದಿತು. ಆದರೆ ಮಾರ್ಗವೆಲ್ಲಿದೆ ? ಅವನು ಮತ್ತೆ ನಾಲ್ಕಡಿ ಮುಂದೆ ಹೋಗಿ ತಲೆಕೆಳಗಾಗಿ ನೇತಾಡುವವನನ್ನು ಪರೀಕ್ಷಿಸಿ ನೋಡಿದನು. ಅವನ ಶರೀರದ ಮೇಲೆ ಯಾವ ಗಾಯವೂ ಕಾಣಲಿಲ್ಲ. ಬಹುಶಃ ಅವನ ವಿರೋಧಿ ಗಳು ಈ ರೀತಿಯಾಗಿ ಅವನನ್ನು ಶಿಕ್ಷಿಸಿರಬೇಕು. ಇವನು ಹಸಿವೆ ನೀರಡಿಕೆಗಳಿಂದ ಒಣಗಿ ಸತ್ತು ಹೋಗಿದ್ದಾನೆಂದು ಸಮರಸೇನನಿಗೆ ತೋರಿತು.

ಸತ್ತರೂ ನೇತಾಡಿಕೊಂಡು ಹದ್ದುಗಳ ಬಾಯಿಗೆ ಬೀಳಲಿರುವವನನ್ನು ನೋಡಿ ಅವರೆಲ್ಲರಿಗೂ ಕನಿಕರ ವಾಯಿತು. ಸಮರಸೇನನು ಸೈನಿಕರ ಕಡೆಗೆ ಬಂದು, "ಈ ಮನುಷ್ಯನಿಗೆ ಬಂದ ಪರಿಸ್ಥಿತಿಯಲ್ಲಿ ಏನೋ ರಹಸ್ಯವಿದ್ದೀತು. ಅದನ್ನು ಹೇಗೆ ತಿಳಿದುಕೊಳ್ಳು ವುದೋ ಗೊತ್ತಾಗುವುದಿಲ್ಲ. ಒಂದು ಮಾತ್ರ ನಿಜ. ಈ ದ್ವೀಪದ ಸ್ವಲ್ಪ ಭಾಗವು ಮಾನವರು ವಾಸ ಮಾಡಲು ತಕ್ಕುದಾದ ಪ್ರದೇಶವೆನ್ನಲು ಸಂದೇಹ ವಿಲ್ಲ. ಅಲ್ಲಿಗೆ ಹೋಗಿ ಇವನ ಈ ದುರ್ಮರಣಕ್ಕೆ ಕಾರಣವೇನೆಂದು ತಿಳಿದುಕೊಳ್ಳಬೇಕು. ಅದರಿಂದ ನಮ್ಮ ಹಡಗನ್ನು ಸೇರುವ ಮಾರ್ಗ ಗೊತ್ತಾಗ ಬಹುದು." ಎಂದನು.

ಅಷ್ಟರಲ್ಲಿ ಸಮರಸೇನನ ದೃಷ್ಟಿ ದೂರದಲ್ಲಿದ್ದ ಯಾವುದೋ ಒಂದು ವಸ್ತುವಿನ ಮೇಲೆ ಬಿದ್ದು ಹಬ್ಬೇರಿಸಿದನು. ಬೇಗ ಹೋಗಿ ಆ ವಸ್ತುವನ್ನು ಕೈಗೆತ್ತಿಕೊಂಡನು. ಅದು ಒಡೆದು ಹೋದ ಒಂದು ಸೋರೇ ಬುರುಡೆ. ಅದರ ಮೂತಿ ಚಿಕ್ಕದಾಗಿದ್ದಿತು. ಅದಕ್ಕೊಂದು ಹಗ್ಗವನ್ನೂ ಕಟ್ಟಲ್ಪಟ್ಟಿತ್ತು. ಅಡಿ ಭಾಗದಲ್ಲಿ ಒಡೆದು ಹೋದ ಆ ಸೋರೇ ಬುರುಡೆ ಯನ್ನು ಯಾರೋ ಅಲ್ಲಿ ಬಿಸುಟು ಹೋಗಿದ್ದಾರೆ.

ವುದರಿಂದ ನಮಗೆ ಎಷ್ಟೋ ಪ್ರಯೋಜನವಾಗ ಬಹುದು. ಅಂದರೆ ಮುಖ್ಯವಾಗಿ ಈ ಅದ್ಭುತ ದ್ವೀಪದಲ್ಲಿ ನಾವು ಹೇಗೆ ನಡೆದುಕೊಳ್ಳಬೇಕೆಂಬುದು ತಿಳಿಯಬಹುದು. ನಾವಂತೂ ಸದ್ಯ ನಮ್ಮ ಹಡಗು ಗಳಿಗೆ ದೂರವಾಗಿ ಬಿಟ್ಟೆವಲ್ಲ? ಈ ದ್ವೀಪದಲ್ಲಿ ಹೇಗೋ ಅಲೆದಾಡಬೇಕಾಗಿ ಬಂದಿತಲ್ಲಾ ?"

ಸಮರಸೇನನ ಮಾತುಗಳನ್ನು ಕೇಳುತ್ತಿದ್ದಂತೆ ಸೈನಿಕರಿಗೆ ಕೆಟ್ಟ ನಿರಾಶೆಯೇ ಕವಿದುಬಂದಂತೆ ತೋರಿತು. ಅವರು ತಮ್ಮ ಹಡಗನ್ನು ಸೇರಿ ತಮ್ಮ ರಾಜ್ಯಕ್ಕೆ ಹೋಗುವ ಆತುರದಲ್ಲಿದ್ದರು. ಆದುದ ರಿಂದ ಅವರಿಗೆ ಸೇನಾನಿಯ ಮಾತುಗಳು ಕಹೀರಸ ಕುಡಿಯುವ ಹಾಗಾಯಿತು. ಈಗಾದರೂ ನಮ್ಮ ದಾರಿ ನಾವು ನೋಡಿಕೊಂಡು ಹೋಗುವುದನ್ನು ಬಿಟ್ಟು, ಈ ಅಡವಿ ಮನುಷ್ಯನ ನಿವಾಸಸ್ಥಾನ ವನ್ನು ಹುಡುಕುವ ಗೊಡವೆ ಹೇಳುತ್ತಾನೇಕೋ ? ಹೀಗೆಂದುಕೊಂಡು ಸೈನಿಕರು ಮಾತಾಡಿದಿರುವು




ಆ ಸೋರೇ ಬುರುಡೆ ಪ್ರಯಾಣದಲ್ಲಿ ನೀರು ತಗೆದುಕೊಂಡು ಹೋಗಲು ಉಪಯೋಗಿಸುವಂತೆ ಕಾಣುತ್ತಿತ್ತು.

"ಆಹಾ! ನಮ್ಮ ಮೇಲೆ ಕುಂಡಲಿನೀ ದೇವಿಯ ಕರುಣಾಕಟಾಕ್ಷವಿದೆ!" ಎನ್ನುತ್ತಾ ಸಮರಸೇನನು ಆಕಾಶದ ಕಡೆಗೆ ನೋಡಿ ಕೈಗಳನ್ನೆತ್ತಿ ಜೋಡಿಸಿದನು.

ತಮ್ಮ ನಾಯಕನು ಹಾಗೆ ಮಾಡಲು ಕಾರಣವೇನೆಂದು ತಿಳಿಯದಿದ್ದರೂ, ಅವನು ಮಾಡಿದಂತೆಯೇ ಸೈನಿಕರೂ ಆಕಾಶ ನೋಡಿ ನಮಸ್ಕಾರ ಮಾಡಿದರು. ಅವರು ಕಣ್ಣುಗಳಲ್ಲಿ ಕಾಣುವ ಆಶ್ಚರ್ಯವನ್ನೂ, ಪ್ರಶ್ನೆಯನ್ನೂ ಸಮರಸೇನನು ಅರ್ಥ ಮಾಡಿಕೊಂಡು, "ನೋಡಿದಿರಾ? ಇನ್ನು ನಮಗೆ ಭಯವಿಲ್ಲ. ನಿಮಗೆ ಅರ್ಥವಾಗಲಿಲ್ಲವೇ? ನಾವು ಈಗ ಮಾನವರು ವಾಸ ಮಾಡುವ ಪ್ರದೇಶವನ್ನು ಸಮೀಪಿಸಿದ್ದೇವೆ. ಈ ನಿರ್ಭಾಗ್ಯನನ್ನು ಹೀಗೆ ನೇತಾಡಿಸಿ ಕೊಂದವರು ಯಾವ ಮಾಂತ್ರಿಕರೋ ಅಲ್ಲ; ಅವನಂಥ ಮನುಷ್ಯರೇ. ಈ ಸೋರೆ ಬುರುಡೆ ಮನುಷ್ಯರು ಉಪಯೋಗಿಸಿಕೊಂಡದ್ದು. ಆದುದರಿಂದ ನಾವು ಸ್ವಲ್ಪ ಜಾಗರೂಕತೆಯಿಂದ ಹುಡುಕಿದರೆ ಮನುಷ್ಯರು ಇಲ್ಲಿಗೆ ಯಾವ ದಾರಿಯಿಂದ ಬಂದರೆಂದು ಕಂಡುಹಿಡಿಯಬಹುದು. ಆಗ ಅದೇ ದಾರಿಯಲ್ಲಿ ಹಿಂದಿರುಗಿ ಹೋಗಿದ್ದಾರೆಂದೂ ಆಗುತ್ತದೆ" ಎಂದನು.

ಕೂಡಲೇ ಸೈನಿಕರಿಗೆ ಉತ್ಸಾಹ ಹುಟ್ಟಿತು. ಆ ಪ್ರಾಂತದಲ್ಲಿ ಮಾನವರು ತುಳಿದ ದಾರಿ ಯಾವುದಾದರೂ ಇದೆಯೋ ಎಂಬುದನ್ನು ಹುಡುಕ ತೊಡಗಿದರು. ಸ್ವಲ್ಪ ಹೊತ್ತಿನಲ್ಲಿ ಅವರ ಶ್ರಮಕ್ಕೆ ಫಲಸಿಕ್ಕಿತು. ಆಕಡೆ ಹಸಿ ಹುಲ್ಲಿನ ಬಯಲಿನಲ್ಲಿ ಉದ್ದಕ್ಕೆ ಕಾಣಿಸುವ ದಾರಿಯ ಗುರುತು ಬಹಳ ಮಂದಿ ಮನುಷ್ಯರು ಗುಂಪು ಗುಂಪಾಗಿ ಆ ಬಯಲಿನ ಮಧ್ಯದಲ್ಲಿ ಹೋಗಿಬರುವರೆಂಬುದನ್ನು ಸೂಚಿಸುತ್ತಿತ್ತು.

ಎಲ್ಲರೂ ಉತ್ಸಾಹದಿಂದ ಆ ದಾರಿಯನ್ನು ಹಿಡಿದು ನಡೆಯ ತೊಡಗಿದರು. ಸುಮಾರು ಅರ್ಧ ಗಂಟೆಯಲ್ಲಿ ಅವರು ಒಂದು ಎತ್ತರವಾದ ಪ್ರದೇಶವನ್ನು ತಲಪಿದರು. ಅಲ್ಲಿ ನಿಂತು ಸುತ್ತಲೂ ಕಣ್ಣು ಹಾಯುವಷ್ಟು ದೂರದವರೆಗೆ ನೋಡಿದರು. ಅಗ್ನಿಪರ್ವತವು ಇನ್ನೂ ಉರಿಕಾರಿಕೊಂಡೇ ಇದ್ದಿತು. ಪ್ರಾಣಿಗಳು ಪ್ರಾಣಭೀತಿಯಿಂದ ಓಡಿಕೊಂಡೇ ಇದ್ದುವು. ಅವುಗಳ ಕೂಗಾಟ ಕರ್ಣಕಠೋರವಾಗಿ ಕೇಳುತಿದ್ದಿತು. ದೂರದಲ್ಲಿ ಒಂದೆರಡು ಕಡೆಯಲ್ಲಿ ಕಾಡುಗಿಚ್ಚು ಉರಿಯುವ ಅಗ್ನಿಮಾಲೆಯೂ ಕಾಣುತಿತ್ತು.

ಸಮರಸೇನನು ಮುಂದೆ ನಡೆಯುತ್ತಿದ್ದಂತೆ ಸೈನಿಕರು ಅವನನ್ನು ಅನುಸರಿಸಿಕೊಂಡಿದ್ದರು. ಯಾವ ಕಡೆಯಿಂದ ಯಾವ ಕ್ಷಣದಲ್ಲಿ ಕ್ರೂರಮೃಗಗಳೋ, ಮಾಂತ್ರಿಕರೋ ತಮ್ಮನ್ನು ಅಡ್ಡಕಟ್ಟುತ್ತವೇನೋ ಎಂಬ ಸಂದೇಹವಿದ್ದೇ ಇದ್ದಿತು. ಮನಸ್ಸಿನಲ್ಲಿ ಕುಂಡಲಿನೀದೇವಿಯ ಸ್ತುತಿಮಂತ್ರವನ್ನು ಪಠಿಸಿ




ಕೊಂಡಿದ್ದರು. ಕತ್ತಿ ಬಿಲ್ಲು ಬಾಣಗಳನ್ನು ಸಿದ್ಧ ವಾಗಿಟ್ಟುಕೊಂಡು ನಡೆಯುತ್ತ ಸ್ವಲ್ಪ ಹೊತ್ತಿಗೆ ಅವರೆಲ್ಲ ಒಂದು ನದಿಯ ತೀರವನ್ನು ತಲಪಿದರು.

ನದಿಯ ಜಲವು ವಿಪರೀತ ವೇಗದಿಂದ ಪ್ರವಹಿಸಿ ಕೊಂಡಿತ್ತು. ನದಿಯ ಮಧ್ಯದಲ್ಲಿ ಇಲ್ಲೀ ಅಲ್ಲೀ ಎಂಬ ಹಾಗೆ ಚಿಕ್ಕವೂ ದೊಡ್ಡವೂ ಆದ ಬಂಡೇಕಲ್ಲು ಗಳಿದ್ದುವು. ಅವುಗಳಿಗೆ ಹೊಡೆದಪ್ಪಳಿಸಿಕೊಂಡು ಓಡುವ ನೀರು ಭಾರಿ ಶಬ್ದ ಮಾಡುತಿತ್ತು. ಆ ನದಿ ಯನ್ನು ದಾಟಿ ಆಚೆಯ ತೀರಕ್ಕೆ ಹೋಗಬೇಕೇ ಬೇಡವೆ? ತಾವು ಸೇರಬೇಕಾದ ಸ್ಥಳಕ್ಕೆ ಮಾರ್ಗವಾವು ದೆಂದು ತಿಳಿಯದಿರುವಾಗ, ಈ ನದಿಯನ್ನು ದಾಟಿ ದರೂ ಒಂದೇ, ದಾಟದಿದ್ದರೂ ಒಂದೇ ಅನಿಸಿತು ಸಮರಸೇನನಿಗೆ.

ಅವರು ಹೋಗಬೇಕಾದುದು ಪೂರ್ವ ಸಮುದ್ರ ತೀರಕ್ಕೆ. ಆ ದಾರಿಯಲ್ಲಿ ಅಗ್ನಿಪರ್ವತವು ಸಿಡಿದು ಅಂತರಾಯ ಬಂದಿದೆ. ಈಗ ನಡೆಯುವುದು ಯಾವುದೋ ಮತ್ತೊಂದು ದಿಕ್ಕಿಗೆ. ಬಹುಶಃ ಈ ದ್ವೀಪವಾಸೀ ಮಾನವರು ಈ ನದಿಯ ಆಚೆಯ ಬದಿಯಲ್ಲಿದ್ದರೂ ಇರಬಹುದು. ಹೀಗೆಲ್ಲಾ ಸಮರ ಸೇನನು ಯೋಚಿಸುತ್ತಾ ನಿಂತಿರುವುದನ್ನು ನೋಡಿ ಒಬ್ಬ ಸೈನಿಕನು, "ಸೇನಾನೀ ದೊರೆಗಳೇ, ಈ ನದಿ ಯನ್ನು ದಾಟುವುದು ಅಷ್ಟೇನೂ ಸುಲಭವಾದ ಕೆಲಸವಲ್ಲ" ಎಂದನು.

"ಹೌದೆ"ಂದು ತಲೆಯಾಡಿಸಿ ಸಮರಸೇನನು ಮತ್ತೆ ಆಲೋಚನೆಗೆ ಬಿದ್ದನು. "ಬಂಡೆಗಳ ನಡುವೆ ದೊಡ್ಡ ದೊಡ್ಡ ಸುಳಿಗುಂಡಿಗಳೂ ಇರುವ ಹಾಗಿದೆ" ಎಂದ ಇನ್ನೊಬ್ಬ ಸೈನಿಕ. ಆಗ ಸಮರಸೇನನು, "ಬಂಡೆಯಿಂದ ಬಂಡೆಗೆ ಹಾರುತ್ತಾ ಹೋಗಬೇಕು. ಉದ್ದವಾದೊಂದು ಹಗ್ಗವಿದ್ದರೆ ನದಿಯನ್ನು ಸುಲಭ ವಾಗಿ ದಾಟಬಹುದು" ಎಂದನು. ಸಿದ್ಧವಾದ ಹಗ್ಗವು ಅರಣ್ಯದಲ್ಲಿ ಹೇಗೆ ಸಿಗುತ್ತದೆ?

ಸೈನಿಕರು ಸಮೀಪದಲ್ಲಿದ್ದ ಮರಗಳ ಕಡೆಗೆ ಹೋಗಿ, ಅವುಗಳಿಗೆ ಸಿಕ್ಕಾಬಟ್ಟೆ ಸುತ್ತಿಕೊಂಡಿದ್ದ ಬಳ್ಳಿಗಳನ್ನು ಕಡಿದು ಅವುಗಳಿಂದ ಬಲವಾದ ಹಗ್ಗ ವನ್ನು ತಯಾರು ಮಾಡಿದರು. ಆ ಹಗ್ಗದ ಒಂದು ಕೊನೆಯನ್ನು ನದಿಯ ಬದಿಯಲ್ಲಿದ್ದ ಮರದ ಬುಡಕ್ಕೆ ಕಟ್ಟಿದರು. ಇನ್ನೊಂದು ಕೊನೆಯನ್ನು ಹಿಡಿದುಕೊಂಡು ಅದರ ಆಧಾರದಲ್ಲಿ ಒಬ್ಬೊಬ್ಬರೇ ಪ್ರವಾಹದ ನಡುವಿನ ಬಂಡೆಕಲ್ಲ ಮೇಲೆ ಹಾರುತ್ತ ಎಲ್ಲರೂ ನದಿಯ ಆಚೆಯ ತೀರವನ್ನು ಸೇರಿಬಿಟ್ಟರು.

ಸೈನಿಕರನ್ನು ಎಚ್ಚರಿಸಿ ಸಮರಸೇನನು ಸಮೀಪ ದಲ್ಲಿದ್ದೊಂದು ಎತ್ತರವಾದ ದಿಣ್ಣೆಯ ಮೇಲೆ ಏರಿದನು, ಅದರ ಆಚೆಯ ಬದಿಯಲ್ಲಿ ಹೆಚ್ಚು ಮರಮಟ್ಟುಗಳಿರಲಿಲ್ಲ. ಅದರಾಚೆಗೆ ಮಾತ್ರ ಗುಂಪು ಗುಂಪಾಗಿ ಮರಗಳ ಮಯ!

ಸಮರಸೇನನು ನಾಲ್ಕು ಸುತ್ತಲೂ ನೋಡಿ ಸೈನಿಕರನ್ನು ಕರೆದು, ದಿಣ್ಣೆಯ ಮೇಲಿನಿಂದ ಕೆಳ

ಗಿಳಿದು ನಡೆದನು. ಸೈನಿಕರೂ ದಿಣ್ಣೆಯ ಮೇಲಿನಿಂದಾಗಿ ಅವನನ್ನು ಅನುಸರಿಸಿದರು. ಅಲ್ಲಿ ಮನುಷ್ಯರು ನಡೆದ ದಾರಿಯ ಗುರುತು ಹಿಡಿದು ನಡೆಯುತ್ತ, ಅವರೆಲ್ಲ ಮರಗಳ ಗುಂಪಿನೊಳಗೆ ಹೊಕ್ಕು ಮುಂದುವರಿದರು.

ಇದ್ದಕ್ಕಿದ್ದ ಹಾಗೆ ಆನೆಗಳು ಘೀಂಕಾರ ಮಾಡಿದ ಧ್ವನಿ ಕೇಳಿತು. ಸೈನಿಕರು ಭಯದಿಂದ ಬೆವೆತು ನಾಯಕನ ಮುಖ ನೋಡಿದರು. ಸಮರಸೇನನು ಸೈನಿಕರಿಗೆ ಸನ್ನೆಮಾಡುತ್ತಾ ಓಡಿ ಹೋಗಿ, ಒಂದು ಭಾರಿ ಮರದ ಮೇಲೆ ಏರಿಕೊಂಡನು. ಸೈನಿಕರು ಕೂಡಾ ಅವನ ಹಿಂದೆಯೇ ಓಡಿ ಆ ಮರದ ಮೇಲೆ ಹತ್ತಿದರು. ನೋಡುತ್ತಿದ್ದಂತೆ ಚಿಕ್ಕದೊಂದು ಆನೆಗಳ ಮಂದೆ ಘೀಂಕರಿಸುತ್ತಾ ಆ ಪ್ರದೇಶಕ್ಕೆ ಬಂದಿತು. ಅವೆಲ್ಲ ತುಂಬ ಭಯಪಟ್ಟಂತಿದ್ದುವು.

ಅರಣ್ಯದಲ್ಲಿ ಅನೇಕ ಕಡೆಯಲ್ಲಿ ಎದ್ದಿರುವ ಕಾಡು ಗಿಚ್ಚನ್ನು ನೋಡಿ ಅದರಿಂದ ತಪ್ಪಿಸಿಕೊಳ್ಳಲು ಈ ಆನೆಗಳು ತಮ್ಮ ಜತೆಗಾರರನ್ನು ಕರೆಯುತ್ತಾ ಓಡುತ್ತಿದ್ದುವು. ಅವುಗಳ ಹೆಜ್ಜೆಗಳ ಸಪ್ಪಳಕ್ಕೆ ಭೂಮಿ ಪ್ರತಿಧ್ವನಿಸುತ್ತಿದ್ದಿತು. ಚಿಕ್ಕ ಚಿಕ್ಕ ಗಿಡ ಪೊದೆಗಳು ಅವುಗಳ ಹಜ್ಜೆಗಳಿಂದ ನೆಲಸಮವಾದುವು.

ಮರದ ಮೇಲೆ ಏರಿಕೊಂಡ ಸಮರಸೇನನೂ ಸೈನಿಕರೂ, ಇಂಥ ಮರ ಸಮೀಪವಿಲ್ಲದಿರುತ್ತಿದ್ದರೆ ತಾವೆಲ್ಲ ಆ ಹುಚ್ಚುಗಟ್ಟಿ ಓಡುತ್ತಿರುವ ಆನೆಗಳ ಕಾಲಬುಡದಲ್ಲಿ ಹುಳುಗಳಂತೆ ಸಾಯಬೇಕಿತ್ತೆಂದು ನೆನೆಯುವಾಗ ಅವರ ಶರೀರವು ಜುಮುಗುಟ್ಟಿತು. ತಮ್ಮನ್ನು ರಕ್ಷಿಸಿದ್ದು ಕುಂಡಲಿನೀ ದೇವಿಯೇ ಸರಿ! ಎಲ್ಲರೂ ಮನಸ್ಸಿನಲ್ಲೇ ತಮ್ಮ ಇಷ್ಟ ದೇವಿಯನ್ನು ಸ್ಮರಿಸಿದರು.

ಎರಡು ಮೂರು ಆನೆಗಳ ಮಂದೆ ಆ ದಾರಿಯಾಗಿ ಓಡಿದುವು. ಮತ್ತೆ ಯಾವ ಸದ್ದೂ ಕೇಳಿಬರದೆ ಹೋದರೂ ಅವಸರಪಟ್ಟು ಮರದಿಂದಿಳಿಯಲು ಎಲ್ಲರಿಗೂ ಭಯವೇ.

ಬಹಳ ಹೊತ್ತಾದ ಮೇಲೆ ಇನ್ನೇನೂ ಬಾರದೆಂಬ ಧೈರ್ಯದಿಂದ ಅವರೆಲ್ಲ ಮರದಿಂದ ಕೆಳಕ್ಕೆ ಇಳಿದರು. ಸ್ವಲ್ಪ ಹೊತ್ತು ದಿಕ್ಕುಗಳನ್ನು ನೋಡುತ್ತಾ ನಿಂತರು. ಎಲ್ಲಿ ಯಾವ ಹಲ್ಲಿ ಹರಣೆಗಳ ಸದ್ದಾದರೂ ಹೆದರುತ್ತಿದ್ದರು. ಆ ಮೇಲೆ ತಾವು ಅನುಸರಿಸಿ ಬಂದ ಕಾಲುದಾರಿಯನ್ನು ಹುಡುಕ ತೊಡಗಿದರು. ಅದರ ಗುರುತೇ ಕಾಣಲಿಲ್ಲ. ಆನೆಗಳ ಪಾದಗಳಿಂದ ಆ ಪ್ರದೇಶವೆಲ್ಲಾ ಮಟ್ಟಸವಾಗಿ ಹೋಗಿತ್ತು. ಈಗೇನು ಮಾಡಬೇಕೆಂದು ತಿಳಿಯದೆ ಆಚೆಗೂ ಈಚೆಗೂ ನೋಡುತ್ತ ನಿಂತರು. ಮುಂದೆ ಹೋಗಬೇಕೆಂದಿದ್ದರೂ, ಆ ಹೆಮ್ಮರವನ್ನು ಬಿಟ್ಟು ದೂರ ಹೋಗುವ ಧೈರ್ಯ ಬರಲಿಲ್ಲ. (ಇನ್ನೂ ಇದೆ)





# ಧರ್ಮಿಷ್ಠನ ಅಧರ್ಮ

ಕಾರ್ಯದೀಕ್ಷೆಯ ಉತ್ಸಾಹದಲ್ಲಿ ಹಸಿವೆ ನೀರಡಿಕೆಗಳನ್ನು ಮರೆತ ರಾಜಾ ತ್ರಿವಿಕ್ರಮನು, ನೆಟ್ಟಗೆ ಮರದ ಬಳಿಗೆ ಹಿಂದಿರುಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಬೇತಾಳಾವೇಶಿತವಾದ ಮಾನವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು, ಮೌನ ಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿತು: "ರಾಜಾ! ನೀನು ಮಾಡುವ ಕೆಲಸವು ಧರ್ಮವೋ ಅಧರ್ಮವೋ ಎಂಬುದರ ಜಿಜ್ಞಾಸೆಗಿಂತಲೂ ನಿನ್ನ ಕಾರ್ಯವು ಜಯಪ್ರದವಾಗುವುದೋ ಇಲ್ಲವೋ ಎಂಬುದೇ ಮುಖ್ಯವಾಗಿದೆ. ಸಿಂಹಪುರಿಯರಾಜನಾದ ನರಸಿಂಹವರ್ಮನಂತಹ ಧರ್ಮಪರನಾದವನು, ವಿಜಯಶಾಲಿಯಾಗಬೇಕೆಂದು ಘೋರವಾದ ಅಧರ್ಮದ ಕಾರ್ಯಕ್ಕೆ ಕೈಹಾಕಿ ಬಿಟ್ಟನು. ನಿನಗೆ ದಾರಿಯ ಶ್ರಮ ಗೊತ್ತಾಗದ ಹಾಗೆ ಆ ಕಥೆಯನ್ನು ಕೇಳು" ಎಂದು ಕಥೆಯನ್ನು ಹೇಳಲು ತೊಡಗಿತು:

ಹಿಂದೆ ಶೋಣಪುರವೆಂಬ ದೇಶದರಾಜನು ಜಯಪುರದರಾಜನಿಗೆ ಸಾಮಂತನಾಗಿದ್ದನು. ಶೋಣ

## ಬೇತಾಳ ಕಥೆಗಳು



ಪುರವು ಚಿಕ್ಕ ರಾಜ್ಯವಾದರೂ ಬೇಕಾದುದೆಲ್ಲಾ ಅಲ್ಲಿತ್ತು. ಜಯಪುರದ ರಾಜನು ಶೋಣಪುರದ ರಕ್ಷಣೆಗೂ ತಲೆ ಹಾಕುತ್ತ, ಆ ರಾಜ್ಯವು ಸಿರಿಸಂಪದ ಗಳಿಂದ ತುಂಬ ಅಭಿವೃದ್ಧಿಗೇರುವಂತೆ ಮಾಡಿದ್ದನು.

ಹೀಗೆ ಮೆರೆಯುವ ಶೋಣಪುರದ ಮೇಲೆ ಮಣಿ ಪುರದ ರಾಜನಾದ ಮಣಿಮಂತನ ದೃಷ್ಟಿಬಿತ್ತು. ಸಮಯ ಹೊಂಚುತ್ತಿದ್ದ ಅವನು, ಅಕಸ್ಮಾತ್ತಾಗಿ ಆ ಚಿಕ್ಕ ರಾಜ್ಯದ ಮೇಲೆ ದಾಳಿ ಮಾಡಿದನು.

ಈ ಸಂಘಟನೆಯನ್ನು ನೋಡಿ ಜಯದೇವನು ದೊಡ್ಡ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದನು. ಶೋಣಪುರ ವನ್ನು ರಕ್ಷಿಸುವ ಭಾರವು ಅವನ ಮೇಲೆ ಇದ್ದಿತು. ಆದರೆ ಸರ್ವಸಿದ್ಧತೆಯಿಂದ ಬಂದ ಮಣಿಮಂತನನ್ನು ಜಯಿಸುವಷ್ಟು ಬಲ ಅವನ ಹತ್ತಿರ ಸಿದ್ಧವಾಗಿರ ಲಿಲ್ಲ. ಅವನು ತನ್ನ ಮಂತ್ರಿಯೊಡನೆ ಆಲೋಚನೆ ಮಾಡಿ, ಮಂತ್ರಿಯ ಸಲಹೆಯಂತೆ, ಸಿಂಹಪುರದ ರಾಜನಾದ ನರಸಿಂಹವರ್ಮನ ಸಹಾಯವನ್ನು ಪ್ರಾರ್ಥಿಸಿದನು. ಜಯಪುರಕ್ಕೂ ಸಿಂಹಪುರಕ್ಕೂ ತಲಾಂತರಗಳಿಂದ ಸ್ನೇಹಸಂಬಂಧವಿದ್ದಿತು. ನರಸಿಂಹ ವರ್ಮನು ಧರ್ಮಪರಾಯಣನಾದ ರಾಜನೆಂದು ಹೆಸರಾದವನು. ಜಯಪುರಕ್ಕೂ ಶೋಣಪುರಕ್ಕೂ ಏರ್ಪಟ್ಟಿರುವ ಸಮಸ್ಯೆಯನ್ನು ಪರಿಷ್ಕರಿಸುವುದು ತನ್ನ ಧರ್ಮವೆಂದು ತಿಳಿದು, ನರಸಿಂಹವರ್ಮನು ತನ್ನ ಸೇನೆಗಳನ್ನು ಜಯಪುರದ ಸೇನೆಗಳೊಂದಿಗೆ ಕೂಡಿಸಿ, ಮಣಿಪುರದ ಶತ್ರುವಿನ ಮೇಲೆ ಯುದ್ಧಕ್ಕೆ ತೊಡಗಿಸಿದನು.

ಉಭಯ ಪಕ್ಷಗಳಿಗೂ ಎರಡು ದಿನಗಳವರೆಗೆ ಯುದ್ಧ ನಡೆದ ಮೇಲೆ, ವಿಜಯವು ಮಣಿಪುರದ ರಾಜನಿಗೇ ದಕ್ಕುವ ಪರಿಸ್ಥಿತಿಯುಂಟಾಯಿತು. ಆ ಪರಿಸ್ಥಿತಿಯಲ್ಲಿ ಜಯದೇವನು ನರಸಿಂಹವರ್ಮರಾಜ ನೊಂದಿಗೆ ಒಂದು ಕಪಟೋಪಾಯವನ್ನು ಸೂಚಿ ಸಿದನು. ನರಸಿಂಹವರ್ಮನು ಹಾಗೆ ಮಾಡುವುದೇ ಸರಿಯಾದುದೆಂದು ಒಪ್ಪಿಕೊಂಡನು. ಅದರಂತೆ ಅವನು ಮರುದಿನ ಬಿಳೀ ಪತಾಕೆಯನ್ನು ಎತ್ತಿಸಿ, ಮಣಿಪುರದ ರಾಜನೊಂದಿಗೆ ಏಕಪಕ್ಷೀಯವಾದ ಸಂಧಿಯೊಂದು ಮಾಡಿಕೊಂಡು, ರಣರಂಗದಿಂದ ತನ್ನ ಸೈನ್ಯವನ್ನೆಲ್ಲಾ ಹಿಂದಿರುಗಿಸಿಕೊಂಡನು.

ಮಣಿಪುರದ ರಾಜನಿಗೆ ತಾನೇ ಗೆದ್ದೆನೆಂದು ಅತ್ಯಂತ ಸಂತೋಷವಾಯಿತು. ಅವನ ಶಿಬಿರದಲ್ಲಿರುವ ಸೈನಿಕರೂ, ಸೇನಾಪತಿಗಳೂ ವಿಜಯೋತ್ಸಾಹದಿಂದ ಕುಡಿದು ಮೈಮರೆತು ತಧೀಂಗಿಣವಾಡಿಕೊಂಡಿದ್ದಾಗ, ಇದ್ದಕ್ಕಿದ್ದ ಹಾಗೆ ಅವರ ಮೇಲೆ ಜಯಪುರ ಸಿಂಹಪುರಿಗಳ ಸೈನಿಕರು ಒಮ್ಮೆಗೇ ಬಿದ್ದರು. ಮಣಿಪುರದ ಸೈನಿಕರ ನ್ನೆಲ್ಲಾ ದಾರುಣವಾಗಿ ವಧಿಸಿ ಮಣಿಪುರದ ರಾಜ ನನ್ನು ಬಂದಿಯಾಗಿ ಹಿಡಿದರು. ಹೀಗೆ ಶೋಣಪುರವು ಶತ್ರು ಬಾಧೆಯಿಂದ ವಿಮುಕ್ತವಾಯಿತು. ಜಯ ಪುರದ ರಾಜನ ಕೃತಜ್ಞತೆಯನ್ನು ಪಡೆದುಕೊಂಡು ನರಸಿಂಹವರ್ಮನು ತನ್ನ ದೇಶಕ್ಕೆ ಹಿಂದಿರುಗಿದನು.

ಇಲ್ಲಿಗೆ ಬೇತಾಳವು ಕಥೆಯನ್ನು ಮುಗಿಸಿ, "ಎಲೈ ಮಹಾರಾಜನೇ, ನರಸಿಂಹವರ್ಮನು ಎಂತಹ ಧರ್ಮ ಪರಾಯಣನು ? ಧರ್ಮ ಪರಾಯಣನಾದವನು ಜಯದೇವನು ಸೂಚಿಸಿದ ದುರ್ಮಾರ್ಗದ ಕಾರ್ಯಕ್ಕೆ ಒಪ್ಪಿಕೊಳ್ಳುವನೇ ? ಹಾಗೆ ಮಾಡಿ ಅವನು ತನ್ನ ಒಳ್ಳೇ ಹೆಸರನ್ನು ಏಕೆ ಕೆಡಿಸಿಕೊಂಡನು? ತನ್ನ ಕೀರ್ತಿಯನ್ನು ಏಕೆ ಹಾಳು ಮಾಡಿಕೊಂಡನು? ಜಯದೇವನ ಮೇಲಿನ ಸ್ನೇಹವು ಅವನನ್ನು ಕುರುಡಾಗಿಸಿತೆ? ಮಣಿಮಂತನಂತಹ ಬಲಿಷ್ಠನನ್ನು ಹೇಗಾದರೂ ನಿರ್ವೀರ್ಯ ಗೊಳಿಸಬೇಕೆಂಬ ಹಟದಿಂದ ಹಾಗೆ ಮಾಡಿದನೆ ? ಈ ಸಂದೇಹಗಳಿಗೆ ತಕ್ಕ ಸಮಾಧಾನ ಹೇಳಿದರೆ ಮಾತ್ರ ನಿನ್ನ ತಲೆ ಉಳಿಯುತ್ತದೆ, ಎಚ್ಚರ !" ಎಂದು ಸುಮ್ಮನಾಯಿತು,

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ನರಸಿಂಹವರ್ಮನು ಜಯದೇವನು ಹೇಳಿದ ಉಪಾಯವನ್ನು ಅಮಲುಪಡಿಸಿದುದರಲ್ಲಿ ಅಧರ್ಮವೇನೂ ಇಲ್ಲ. ಧರ್ಮದ ನಿರ್ಣಯವು ಪರಿಸ್ಥಿತಿಗಳಿಗೆ ಅನುಗುಣವಾಗಿ ನಡೆಯಿಸಬೇಕಾಗುತ್ತದೆ. ಅನ್ಯಾಯವಾಗಿ ಯಾವಸೂಚನೆಯನ್ನೂ ಕೊಡದೆ, ಆಕಸ್ಮಿಕದಾಳಿ ಮಾಡಿದ ಶತ್ರುವಿನಿಂದ ಶೋಣಪುರವನ್ನು ರಕ್ಷಿಸಿಕೊಳ್ಳಬೇಕಾದುದು ಜಯದೇವನ ಧರ್ಮ. ಆ ಕೆಲಸಕ್ಕೆ ಬೇಕಾದ ಶಕ್ತಿ ಅವನಲ್ಲಿ ಇರಲಿಲ್ಲ. ಅದರಿಂದಲೇ ಅವನು ನರಸಿಂಹವರ್ಮನ ಸಹಾಯ ಕೇಳಿದನು. ಅವನಿಗೆ ಸಹಾಯ ಮಾಡುವುದರ ಮೂಲಕ ಅನ್ಯಾಯವನ್ನು ತೊಲಗಿಸುವ ಧರ್ಮವು ನಡೆಯುವುದೆಂದು ನರಸಿಂಹವರ್ಮನು ಭಾವಿಸಿದನು. ಆ ಕೆಲಸ ಧರ್ಮಯುದ್ಧದಿಂದ ಸಾಧಿಸಲಾಗದಿರುವಾಗ ಅಧರ್ಮ ಮಾರ್ಗವೂ ಅಗತ್ಯವಾಯಿತು. ನರಸಿಂಹವರ್ಮನು ಜಯದೇವನು ಸೂಚಿಸಿದ ಉಪಾಯವನ್ನು ಒಪ್ಪದೆ ಹೊರಟು ಹೋಗಿದ್ದರೆ, ಶತ್ರುರಾಜನ ದೃಷ್ಟಿಯಲ್ಲಿ ಧರ್ಮಪರನೆನಿಸಬಹುದಾದರೂ, ಜಯದೇವನಿಗೆ ಅಧರ್ಮ ಮಾಡಿದಂತೆಯೇ ಆಗುತ್ತಿತ್ತು. ನಿಜಕ್ಕೂ ನರಸಿಂಹವರ್ಮನು ತಲೆ ಹಾಕಿದ್ದು ಜಯದೇವನ ಮೇಲೆ ತನ್ನ ಧರ್ಮವನ್ನು ನಿರ್ವಹಿಸಲಿಕ್ಕೆ ತಾನೇ ? ಅದನ್ನೇ ಅವನು ಮಾಡಿದನು. ಆ ಮಾತಿಗೆ ಬಂದರೆ ಯುದ್ಧ ಮಾಡುವುದೇ ಅಧರ್ಮವಾಗಿದೆ. ಸಾಮಾದಿ ಉಪಾಯಗಳಿಂದ ಕಾರ್ಯ ಸಾಧನೆಯಾಗದೆ ಹೋದರೇನೇ ದಂಡೋಪಾಯ ಅವಲಂಬಿಸಬೇಕು. ಧರ್ಮಯುದ್ಧದಿಂದ ಧರ್ಮ ನಿರ್ವಹಣೆ ಸಾಧ್ಯವಾಗದೆ ಹೋದರೆ ಆ ಕೆಲಸವನ್ನು ಅಧರ್ಮದಿಂದ ನಿರ್ವಹಿಸುವುದು ತಪ್ಪೇನಲ್ಲ !"

ಹೀಗೆ ರಾಜನಿಗೆ ಮೌನಭಂಗವಾದ ಮರು ಕ್ಷಣದಲ್ಲೇ, ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು !



# ಸಾಧು ಸ್ವಭಾವ

ಒಂದಾನೊಂದು ದಿನ ಒಬ್ಬ ರಾಜನು ಅರಣ್ಯಕ್ಕೆ ಬೇಟೆಯಾಡಲು ಹೋದನು. ಅರಣ್ಯದ ಅಂಚಿನಲ್ಲಿ ಒಬ್ಬ ಸಾಧುವಿನ ಆಶ್ರಮವಿದ್ದಿತು.

ರಾಜನು ಅಲ್ಲಿ ತನ್ನ ಆಭರಣಗಳನ್ನು ಭದ್ರಪಡಿಸಿ ಅರಣ್ಯದೊಳಗೆ ಹೋದನು.

ಆ ಸಂಗತಿ ಇಬ್ಬರು ಕಳ್ಳರಿಗೆ ಗೊತ್ತಾಗಿತ್ತು. ಅವರು ರಾಜನ ಆಭರಣಗಳನ್ನು ವಶಪಡಿಸುವ ಉದ್ದೇಶದಲ್ಲಿ ಸಾಧುವಿನ ಕುಟೀರದೊಳಗೆ ಹೊಕ್ಕರು.

ಸಾಧು ಅವರನ್ನು ನೋಡಿದಕೂಡಲೇ ಅವರ ಉದ್ದೇಶವನ್ನು ತಿಳಿದುಕೊಂಡು, "ಇದಕ್ಕೆ ತಾನೇ ಬಂದಿರಿ? ತೆಗೆದುಕೊಳ್ಳಿ" ಎಂದು ರಾಜನ ಆಭರಣಗಳನ್ನೆಲ್ಲಾ ಅವರ ಮುಂದಿಟ್ಟನು.

ಕಳ್ಳರು ಸಾಧುವನ್ನು ಬೆರಗಾಗಿ ನೋಡ ತೊಡಗಿದರು. ಆಗ ಸಾಧು ಅವರೊಂದಿಗೆ, "ಕಳ್ಳತನವು ಮಹಾ ಪಾಪವಲ್ಲವೆ? ಆ ಪಾಪಕ್ಕೆ ನಿಮ್ಮನ್ನು ಗುರಿ ಮಾಡಲು ಇಷ್ಟವಿಲ್ಲದೆ, ನಾನೇ ನಿಮಗೆ ಇವುಗಳನ್ನು ಕೊಡುತ್ತೇನೆ. ನೀವು ಬಲವಂತದಿಂದ ಈ ನಗಗಳನ್ನು ಕದ್ದುಕೊಂಡು ಹೋಗಿ ಹೇಗೋ ಸಿಕ್ಕಿ ಬಿದ್ದರೆ ರಾಜನು ನಿಮ್ಮ ತಲೆ ಕಡಿಸುತ್ತಾನೆ. ಆ ಭಯವೂ ನಿಮಗೆ ಬೇಡ. ನಾನೇ ನಿಮ್ಮನ್ನು ಕರೆದು ಈ ನಗಗಳನ್ನು ಕೊಟ್ಟೆ ಬ್ಬಿದು ರಾಜನೊಂದಿಗೆ ಹೇಳುತ್ತೇನೆ" ಎಂದನು.

ಕಳ್ಳರು ಮೂಕವಿಸ್ಮಿತರಾಗಿ, ಸಾಧುವನ್ನು ಸುಮ್ಮನೆ ನೋಡಿ, ಆಭರಣಗಳನ್ನು ಮುಟ್ಟದೆ ಸುಮ್ಮನೆ ಹೊರಟು ಹೋದರು.





# ಕಾಲಕ್ಷೇಪದ ಕಥೆ

**ಒಂ**ದು ಊರಿನಲ್ಲಿ ಒಂದು ಛತ್ರವಿತ್ತು. ಆ ಛತ್ರದ ಒಂದು ಕೋಣೆಯಲ್ಲಿ ಮೂವರು ರಾತ್ರಿಯನ್ನು ಕಳೆಯಲು ತಂಗಿದ್ದರು. ಹೊರಗೆ ಜೋರಾಗಿ ಗಾಳಿಯೊಂದಿಗೆ ಮಳೆಯೂ ಸುರಿಯುತ್ತಿದ್ದಿತು. ಆದರಿಂದ ಮೂವರಿಗೂ ನಿದ್ದೆ ಹತ್ತುವ ಲಕ್ಷಣ ಕಾಣಲಿಲ್ಲ.

ಅವರಲ್ಲೊಬ್ಬನು ಉಳಿದಿಬ್ಬರನ್ನು ನೋಡಿ, "ನನ್ನ ಹೆಸರು ಚಲಪತಿ. ನಿಮ್ಮ ಹೆಸರು ಹೇಳುವಿರಾ?" ಎಂದು ಮಾತೆತ್ತಿದನು. ಅವರಲ್ಲಿ ಒಬ್ಬನ ಹೆಸರು ಭೂಪತಿಯಂತೆ. ಇನ್ನೊಬ್ಬನು ಗಜಪತಿಯೆಂದು ಗೊತ್ತಾಯಿತು. ಮೂವರೂ ಒಬ್ಬರನ್ನೊಬ್ಬರು ನೋಡಿದರು. ಹೇಗೋ ಕಾಲಕ್ಷೇಪವಾಗಬೇಕೆಂದು ಮೂವರಿಗೂ ತೋರಿತು.

"ಈ ಮಳೆ ಗಾಳಿಗೆ ನಮಗೆ ನಿದ್ದೆಯಂತೂ ಬರಲಾರದು. ಏನಾದರೂ ಹೇಳಿ ಕಾಲಕ್ಷೇಪ ಮಾಡೋಣವೇ?" ಎಂದನು ಚಲಪತಿ. ಉಳಿದಿಬ್ಬರೂ ಒಳ್ಳೆಯದೆಂದು ಎದ್ದು ಹತ್ತಿರ ಹತ್ತಿರವಾಗಿ ಕುಳಿತರು.

"ಮೊದಲು ನಾನು ಮೊನ್ನೆ ರಾತ್ರಿ ನಡೆದ ಘಟನೆ ಹೇಳುತ್ತೇನೆ" ಎಂದು ಚಲಪತಿ ತನ್ನ ಅನುಭವ ಹೇಳ ತೊಡಗಿದ:

ಅವನು ಆ ದಿನ ಆ ಊರಿಗೆ ಹೋದಾಗ ಅಕಸ್ಮಾತ್ತಾಗಿ ಮಳೆ ಪ್ರಾರಂಭವಾಯಿತು. ಹೊಸ ಊರು. ಚಲಪತಿ ಓಡುತ್ತಾ ಒಂದು ಪಾಳು ಬಿದ್ದ ಕೊಟ್ಟಿಗೆಯ ಆರೆ ಗೋಡೆಯ ಹರಕು ಮಾಡಿನ ಕೆಳಗೆ ನಿಂತ. ಅವನಿಗೆ ಒಳ್ಳೆಯ ಕಂಠವೂ ಹಾಡುವ ಹುಚ್ಚೂ ಇತ್ತು. ಮಳೆಯ ಶಬ್ದದೊಂದಿಗೆ ಸ್ಪರ್ಧಿಸುವಂತೆ ಉಚ್ಚ ಕಂಠದಿಂದ ಹಾಡ ತೊಡಗಿದ. ಹಾಡುವ ಉತ್ಸಾಹದಲ್ಲಿ ಮಳೆಯ ತೊಂದರೆ ಗೊತ್ತಾಗಲಿಲ್ಲ.

ಆಗ ಆ ದಾರಿಯಾಗಿ ಬಂದ ಕುದುರೇ ಗಾಡಿ ಅಲ್ಲಿ ನಿಂತಿತು. ಚಲಪತಿ ನಿಲ್ಲಿಸದೆ ಹಾಡುತ್ತಾ ಇರಲು, ಗಾಡಿಯ ತೆರೆಯನ್ನು ಸರಿಸಿಕೊಂಡು, ಧನಿಕನೊಬ್ಬ ಗಾಡಿಯಿಂದಿಳಿದು ಮಳೆಯಲ್ಲಿ ನೆನೆಯುತ್ತಾ ಚಲಪತಿಯ ಬಳಿಗೆ ಬಂದು "ಭೇಷ್! ಬಲು ಚೆನ್ನಾಗಿ ಹಾಡುವೆಯಪ್ಪಾ! ನಾನು ನನ್ನ ಕುಟುಂಬವನ್ನು ತೌರು ಮನೆಯಲ್ಲಿ ಬಿಟ್ಟು ಬರುತ್ತಿದ್ದೇನೆ. ನನಗೆ ಕಾಲಕ್ಷೇಪವಾಗಬೇಕಾಗಿದೆ. ನಿನ್ನ ಹಾಡು ಎಷ್ಟು ಹೊತ್ತಾದರೂ ಕೇಳಬಹುದಾಗಿದೆ. ನನ್ನ ಮನೆಗೆ ಬಂದು ನಿನ್ನ ಹಾಡಿನಿಂದ ನನ್ನನ್ನು ಸಂತೋಷಪಡಿಸು. ಏಕೆ ಮಳೆಯಲ್ಲಿ ಕಷ್ಟಪಡುವಿ?" ಎಂದು ಹೇಳಿ

ಎಂ. ಕೆ. ಈಶ್ವರರಾವ್



ವಾಗಲೇ ಭೂಪತಿ ನನ್ನ ಹಣದ ಮೂಟೆಯನ್ನು ತನ್ನ ಬಟ್ಟೆಗಳ ಗಂಟಿನೊಳಗೆ ಅಡಗಿಸಿಕೊಳ್ಳುವುದನ್ನು ನೋಡಿದೆ. ನನಗೇನೂ ಸಿಟ್ಟು ಬರಲಿಲ್ಲ. ನನ್ನ ಗುಣದವನೇ ಎಂದು ನನ್ನೊಳಗೇ ನಕ್ಕೆ. ಈಗ ನನ್ನ ಮೂಟೆ ನಾನು ತೆಗೆದುಕೊಳ್ಳುತ್ತೇನೆ" ಎಂದು ಭೂಪತಿಯ ಬಟ್ಟೆಯ ಗಂಟಿನಿಂದ ತನ್ನ ಹಣದ ಮೂಟೆಯನ್ನು ತೆಗೆದುಕೊಂಡನು.

ಭೂಪತಿ ಅದಕ್ಕೇನೂ ಅಭ್ಯಂತರ ಹೇಳದೆ, ನಕ್ಕು ಸುಮ್ಮನಾಗಿ, ಆ ದಿನದ ತನ್ನ ಅನುಭವ ಕುರಿತು ಈ ವಿಧವಾಗಿ ಹೇಳಿದನು:

ಮೊನ್ನೆ ರಾತ್ರಿ ಮಳೆ ಬರುತ್ತಿದ್ದಾಗ ಭೂಪತಿ ಅಲ್ಲಿಗೆ ಹತ್ತು ಮೈಲು ದೂರದಲ್ಲಿರುವ ಒಂದು ಹಳ್ಳಿಯಲ್ಲಿದ್ದನು. ಅದು ಅವನಿಗೆ ಹೊಸ ಊರು. ಅಲ್ಲಿ ತನಗೆ ಏನು ಸಿಗುವುದೋ ಎಂದು ಅವನು ಹುಡುಕುತ್ತಿರುವಾಗಲೇ ಕತ್ತಲೆಯಾಯಿತು. ಆ ಊರಿನ ರಾಮದೇವಾಲಯದಲ್ಲಿ ಹರಿ ಕಥಾ ಕಾಲಕ್ಷೇಪಕ್ಕೆ ಏರ್ಪಾಡು ಮಾಡಿದ್ದರು. ಗ್ರಾಮಸ್ಥರು ಊಟ ಮಾಡಿದ ಮೇಲೆ ಒಬ್ಬೊಬ್ಬರೇ ರಾಮಾಲಯಕ್ಕೆ ಹೋಗಿ ಸೇರುತ್ತಿದ್ದರು.

ಭೂಪತಿ ಒಬ್ಬ ಗೌಡನ ಮನೆಯ ಹಟ್ಟಿಯ ಹತ್ತಿರ ಹುಲ್ಲು ಮೆದೆಯ ಹಿಂದೆ ಅಡಗಿಕೊಂಡಿದ್ದ. ಅಂಗಳದಲ್ಲಿ ಮನೆಯವರ ಮಾತುಕಥೆ ಸ್ಪಷ್ಟವಾಗಿ ಕಿವಿಗೆ ಬೀಳುತ್ತಿತ್ತು. ಹರಿಕಥೆಗೆ ಹೋಗುವ ವಿಷಯದಲ್ಲಿ ಗೌಡನಿಗೂ ಅವನ ತಾಯಿಗೂ ಏನೋ ತಕರಾರು. ಆ ತಕರಾರು ಏನೆಂಬುದೂ ಗೊತ್ತಾಯಿತು.

ಗೌಡನ ತಾಯಿ ಹರಿಕಥೆಗೆ ಹೋಗಬೇಕೆಂದು ಪಟ್ಟು ಹಿಡಿದು ಹೇಳುತ್ತಿದ್ದಳು. ಗೌಡನಿಗೆ ಇಷ್ಟವಿಲ್ಲ.

"ನಾವು ಹೋಗುವಾಗ ಹಣ ನಮ್ಮೊಂದಿಗೆ ಬಾರದು. ಬರುವಂಥವು ಪಾಪಪುಣ್ಯಗಳೇ. ನಾಲ್ಕು ಒಳ್ಳೆಯ ಮಾತುಗಳನ್ನು ಕಿವಿಯಲ್ಲಿ ತುಂಬಿಸಿಕೊಂಡರೆ, ನಿನ್ನ ಗಂಟೇನೂ ಮುಳುಗಲಾರದು ಮಗಾ!" ಎಂದು

ಚಲಪತಿಯ ಕೈ ಹಿಡಿದು ಕರೆದೊಯ್ದು ಗಾಡಿಯಲ್ಲಿ ತನ್ನೊಂದಿಗೆ ಕೂಡಿಸಿಕೊಂಡನು.

ಚಲಪತಿ ಆ ಧನಿಕನೊಂದಿಗೆ ಅವನ ಮನೆಗೆ ಹೋಗಿ ಊಟ ಮುಗಿಸಿ ಅರ್ಧರಾತ್ರಿಯವರೆಗೂ ತನ್ನ ಹಾಡಿನಿಂದ ಅವನನ್ನು ಸಂತೋಷ ಗೊಳಿಸಿದ. ಆ ಮೇಲೆ ಇಬ್ಬರೂ ಮಲಗಿದರು. ಧನಿಕನಿಗೆ ಗಟ್ಟಿ ನಿದ್ದೆ ಹತ್ತಿದ ಕೂಡಲೇ ಎಚ್ಚರದಲ್ಲಿದ್ದ ಚಲಪತಿ ಸದ್ದಿಲ್ಲದೆ ಮನೆಯೊಳಗೆಲ್ಲಾ ಹುಡುಕಿ, ಕೈಗೆ ಸಿಕ್ಕಿದಷ್ಟು ಹಣವನ್ನು ಮೂಟೆ ಕಟ್ಟಿಕೊಂಡು ಆ ಮನೆಯಿಂದ ಮೆತ್ತಗೆ ಹೊರ ಬಿದ್ದನು.

ಈ ವಿಷಯ ಪೂರ್ತಿ ಹೇಳಿದ ಮೇಲೆ ಚಲಪತಿ, ಪುನಃ ಹೇಳ ತೊಡಗಿ, "ಕೆಲವರು ಮೂರ್ಖರು ಕಾಲಕ್ಷೇಪದ ಹೆಸರಿನಲ್ಲಿ ಅಮೂಲ್ಯವಾದ ಕಾಲವನ್ನು ಹಾಳು ಮಾಡುವುದು ಮಾತ್ರವಲ್ಲದೆ ಬೇಡದ ಆಪತ್ತನ್ನೂ ತಂದುಕೊಳ್ಳುತ್ತಾರೆ. ಏಕೆ ಹೇಳುತ್ತೇನೆಂದರೆ, ನಾನು ಈ ಛತ್ರದಲ್ಲಿ ಊಟ ಮಾಡಿ ಬರು

ಹೇಳುತ್ತ ಆ ತಾಯಿ ಗೌಡನನ್ನೂ ತನ್ನ ಸೊಸೆಯನ್ನೂ ಹೊರಡಿಸಿಯೇ ಬಿಟ್ಟಳು. ಅವರು ಮನೆಗೆ ಬೀಗ ಹಾಕಿ ಕಾಲಕ್ಷೇಪಕ್ಕೆ ಹೋದರು. ಒಳಗೆ ಬೇರೆ ಯಾರೂ ಇಲ್ಲವೆಂಬುದು ಗೊತ್ತಾಯಿತು.

ಅಷ್ಟರಲ್ಲಿ ಜೋರಾಗಿ ಗಾಳಿ ಮಳೆ ಶುರುವಾಯಿತು. ಆ ಶಬ್ದಗಳ ಮಧ್ಯದಲ್ಲಿ ಭೂಪತಿ ಗೌಡನ ಮನೆಯ ಹಿಂದಿನ ಬಾಗಿಲನ್ನು ಒಡೆದು ಹಾಕುವುದನ್ನು ಅಕ್ಕಪಕ್ಕದ ಮನೆಗಳಲ್ಲಿರುವ ಯಾರೂ ಗಮನಿಸಲಿಲ್ಲ. ಭೂಪತಿ ತನ್ನ ಅದೃಷ್ಟವನ್ನು ಮೆಚ್ಚಿಕೊಂಡು ಮನೆಯೊಳಗೆ ಹೋಗಿ ಸಿಕ್ಕಿದಷ್ಟು ನಗ ನಾಣ್ಯಗಳನ್ನು ಮೂಟೆ ಕಟ್ಟಿಕೊಂಡು ಆ ಮಳೆಯಲ್ಲಿಯೇ ಹೊರಬಿದ್ದು ಕತ್ತಲೆಯಲ್ಲಿ ಕೂಡಿ ಹೋದನು.

ಭೂಪತಿ ಇಷ್ಟು ಹೇಳಿದ ಮೇಲೆ, "ನೋಡಿದಿರಾ! ಹರಿಕಥಾ ಕಾಲಕ್ಷೇಪವು ಆ ಗೌಡನಿಗೆ ಭಾರಿ ನಷ್ಟವನ್ನುಂಟು ಮಾಡಿತು. ಈಗ ಆ ನನ್ನ ನಗಗಳ ಮೂಟೆ ಗಜಪತಿಯ ಹತ್ತಿರ ಇದೆ ಎಂಬ ಸಂಗತಿ ನನಗೆ ಗೊತ್ತಿದೆ. ಇವನು ಆಗಲೇ ಅದನ್ನು ತನ್ನ ಸೊಂಟದಲ್ಲಿ ಸೇರಿಸಿಕೊಂಡಿದ್ದಾನೆ. ಅದನ್ನೀಗ ನಾನು ತೆಗೆದುಕೊಳ್ಳುತ್ತೇನೆ" ಎಂದು ಗಜಪತಿಯ ಸೊಂಟದಲ್ಲಿ ಅಡಗಿಸಿಕೊಂಡಿದ್ದ ತನ್ನ ನಗಗಳ ಮೂಟೆಯನ್ನು ಎತ್ತಿಕೊಂಡನು.

ಗಜಪತಿ ಅದಕ್ಕೇನೂ ಅಡ್ಡಿ ಮಾಡದೆ, ಮುಗುಳು ನಗುತ್ತ ತನ್ನ ಸ್ವಾರಸ್ಯವಾದ ಅನುಭವವನ್ನು ಹೇಳಿದನು. ಅದೇನೆಂದರೆ:

ಅದೇ ಮೊನ್ನಿನ ರಾತ್ರಿ ಮಳೆ ಗಾಳಿ ಬರುವ ಹೊತ್ತಿನಲ್ಲಿ ಗಜಪತಿ ಮತ್ತೊಂದು ಊರಿನಲ್ಲಿ ಸುತ್ತಾಡಿಕೊಂಡಿದ್ದ. ಪ್ರತಿ ಮನೆಯನ್ನೂ ಆಶೆಯಿಂದ ಹಣಿಕಿ ನೋಡುತ್ತಿದ್ದ. ಆಗ ಗಾಳಿ ಮಳೆ ಜೋರಾಗಿ ಬರ ತೊಡಗಿತು. ಗಜಪತಿ ಒಂದು ಮನೆಯ ಜಗಲಿಯ ಮೇಲೇರಿ ತಲೆ ಕಾಯ್ದುಕೊಂಡನು, ಆಗ ಒಳಗಿನಿಂದ ಹೊರಡುವ ಮಾತುಗಳನ್ನು ಕಿವಿಗೊಟ್ಟು ಕೇಳ ತೊಡಗಿದ.

"ಮನೆಯಲ್ಲಿ ನಾನೊಬ್ಬಳೇ ಇರಲಾರೆ. ಮಳೆ ಬರುತ್ತಾ ಇರುವಾಗ ಈ ಮಳೆಯಲ್ಲಿ ಜೂಜಾಡಲು



ಹೋಗದಿದ್ದರೇನು ? ಸುಮ್ಮನೆ ಬೆಚ್ಚಗೆ ಮಲಗಬಾರದೆ? ಕಗ್ಗಾನುಗತ್ತಲೆ ಬೇರೆ! ಇಷ್ಟು ಕಷ್ಟಪಟ್ಟು ಆಡದಿದ್ದರೇನಾಗುತ್ತದೆ ?" ಎಂದವಳು ಹೆಂಗುಸು.

"ನನಗೆ ನಿದ್ದೆ ಬರುವುದಿಲ್ಲ, ಬೆಳತನಕ ಸಂತೋಷವಾಗಿ ಕಾಲಕ್ಷೇಪವಾಗ ಬೇಕಾಗಿದೆ" ಎಂದವನು ಗಂಡುಸು.

ಅವರಿಬ್ಬರೂ ಗಂಡ ಹೆಂಡಿರೆಂದು ಗಜಪತಿಗೆ ಅರ್ಥವಾಯಿತು. ಹೆಂಡತಿ ಎಷ್ಟು ತಡೆದರೂ ಕೇಳದೆ ಗಂಡನು, "ಬೇಗ ಬರುತ್ತೇನೆ ಬಿಡೇ ! ಬಾಗಿಲು ಹತ್ತಿರ ಹಾಕಿಕೊಂಡಿರು, ನಿನ್ನದು ಪೊದ್ದು ನಿದ್ದೆ. ಎಷ್ಟು ಹೊತ್ತು ಬಡಿದರೂ ಬಾಗಿಲು ತೆರೆಯಲಾರೆ. ಒಳಗೆ ತಾಳ ಹಾಕಬೇಡ" ಎಂದು ಹೇಳಿ ಹೊರಗೆ ಹೋದನು. ಆಗ ತಾನು ಅವನ ಕಣ್ಣಿಗೆ ಬೀಳದಂತೆ ಗಜಪತಿ ಜಗಲಿಯಲ್ಲಿದ್ದ ಸ್ತಂಭದ ಮರೆಯಲ್ಲಿ ಅಡಗಿದನು.

ಅದುವರೆಗೆ ಸ್ವಲ್ಪ ನಿಂತಿದ್ದ ಮಳೆ ಮತ್ತೆ ಜೋರಾಗಿ ಸುರಿಯ ತೊಡಗಿತು. ಜೂಜಾಡಲು ಹೋದವನು ಬೇಗನೇ ಎಲ್ಲಿ ಬರುತ್ತಾನೆ? ಮನೆಯಲ್ಲಿರುವವಳು ಗಾಢವಾಗಿ ನಿದ್ದೆ ಹೋಗಿರುತ್ತಾಳೆ. ಇದೇ ಸರಿಯಾದ ಸಮಯ ! ಹೀಗಂದುಕೊಂಡು ಗಜಪತಿ ಬೆಕ್ಕಿನ ಹಜ್ಜೆಗಳಿಂದ ಮನೆಯೊಳಗೆ ಪ್ರವೇಶಿಸಿ ಸಿಕ್ಕಿದ ಚಿನ್ನ ಬೆಳ್ಳಿ ಹಣಗಳನ್ನು ಮೂಟೆ ಕಟ್ಟಿಕೊಂಡು, ನಿಶ್ಶಬ್ದವಾಗಿ ಹೊರಗೆ ಬಂದು ಆ ಊರನ್ನೇ ಬಿಟ್ಟು ನಡೆದನು. "ಆ ಮನೆಯ ಒಡೆಯನಿಗೆ ಕಾಲಕ್ಷೇಪವಾಗಬೇಕಾಗಿಬಂದುದು ನನಗೆ ವರವಾಯಿತು. ಆದರೆ ನನ್ನ ಆ ಮೂಟೆ ಈಗ ನನ್ನ ಹತ್ತಿರ ಇಲ್ಲ. ಚಲಪತಿ ಅದನ್ನು ಕಿಟಕಿಯ ಮೇಲಿರುವ ಗೂಡಿನಲ್ಲಿ ಅಡಗಿಸಿಡುವುದನ್ನು ನೋಡಿದ್ದೇನೆ. ಇದೋ, ತೆಗೆದು ಕೊಳ್ಳುತ್ತೇನೆ !" ಎಂದು ಹೇಳಿ ಗಜಪತಿ ತನ್ನ ಮೂಟೆಯನ್ನು ತೆಗೆದುಕೊಡನು.

ಹೀಗೆ ಮೂವರೂ ಅವರವರ ಮೂಟೆಯನ್ನು ಅವರವರು ತೆಗೆದುಕೊಂಡು "ನಾವು ಮೂವರೂ ಒಬ್ಬರಿಗಿಂತೊಬ್ಬರು ಕಡಿಮೆಯವರೇನಲ್ಲ !" ಎಂದು ಗಟ್ಟಿಯಾಗಿ ನಕ್ಕರು.

ಆಗ ಆ ಕೋಣೆಯ ಬಾಗಿಲು ದಭಾಲನೆ ಎಳೆದುಕೊಂಡು, ಚಿಲಕ ಹಾಕಿದ ಶಬ್ದ ಕೇಳಿತು. ಛತ್ರದ ಅಧಿಕಾರಿ ಕಿಟಕಿಯಿಂದ ಒಳಗೆ ನೋಡುತ್ತ, "ನೀವು ನಿಮ್ಮನ್ನು ಕುರಿತು ಹೇಳಿಕೊಂಡ ಒಳ್ಳೆಯ ಕಾಲಕ್ಷೇಪದಿಂದ ಇನ್ನು ಮುಂದಿನ ನಿಮ್ಮ ಆಟ ನಿಂತಿತು. ಎಲ್ಲವನ್ನೂ ಕೇಳಿದೆ. ನೀವು ಕಳ್ಳ ಸೊತ್ತುಗಳೊಂದಿಗೇ ಸಿಕ್ಕಿಬಿದ್ದಿರಿ. ಬೆಳಗಾಗುವವರೆಗೆ ಹೇಗೋ ಕಾಲಕ್ಷೇಪ ಮಾಡಿರಿ. ಆ ಮೇಲೆ ಮೈತುಂಬಾ ಕೆಲಸ ಬೀಳುವ ಸೆರೆ ಮನೆಗೆ ನಡೆಯುವಿರಂತೆ!" ಎಂದು ಹೇಳಿ. ಬಾಗಿಲಿಗೆ ಹೊರಗಿನಿಂದ ದೊಡ್ಡ ಬೀಗವನ್ನು ಹಾಕಿದನು.





# ಸಂಬಂಧಿಕರು

**ಒಂ**ದು ಊರಿನಲ್ಲಿ ಶಾಂತಮ್ಮನೆಂಬ ಕಷ್ಟಪಟ್ಟು ಜೀವಿಸುವ ಹೆಂಗುಸಿದ್ದಳು. ಅವಳಿಗೆ ರಾಮಪ್ಪ, ಶಾಂತಪ್ಪ, ಕಮಲೆ ಎಂಬ ಮಕ್ಕಳಿದ್ದರು. ಶಾಂತಮ್ಮನ ಗಂಡನು ತೀರಿಹೋದ ಮೇಲೆ, ಅವಳು ಮೂವರು ಮಕ್ಕಳನ್ನೂ ಪೋಷಿಸಬೇಕಾಯಿತು, ಧನಿಕರ ಮನೆಯಲ್ಲಿ ಅಡಿಗೆಯವಳಾಗಿ ಸೇರಿದಳು. ದೊಡ್ಡ ಮಗ ರಾಮಪ್ಪ ಬುದ್ಧಿವಂತನಾದ ಹುಡುಗ. ಅವನು ತನ್ನ ಊಟಕ್ಕೆ ವಾರದ ಮನೆ ಮಾಡಿಕೊಂಡು ಮನಸ್ಸು ಕೊಟ್ಟು ಓದು ಕಲಿತನು. ಒಳ್ಳೆಯವರಾದ ಅಪ್ಪಾರಾಯರು ವಾರಕ್ಕೆ ಎರಡು ದಿನ ತಮ್ಮಲ್ಲೇ ಅವನಿಗೆ ಊಟ ಹಾಕುತ್ತಿದ್ದರು. ಅಪ್ಪಾರಾಯರು ಅಷ್ಟೇನೂ ಧನಿಕರಲ್ಲದಿದ್ದರೂ, ಬಡವರ ಮೇಲೆ ವಿಶೇಷ ಕನಿಕರ ಅವರಿಗೆ.

ಓದುವುದರಲ್ಲಿ ಗಟ್ಟಿಗನಾದ ರಾಮಪ್ಪ ಎಲ್ಲಿಯೂ ಎಡವದೆ ತಡವದೆ ಉತ್ತೀರ್ಣನಾದನು. ನಗರದಲ್ಲಿ ಅವನಿಗೆ ಒಳ್ಳೆಯ ಉದ್ಯೋಗವು ಸುಲಭವಾಗಿಯೇ ದೊರಕಿತು. ಕೈತುಂಬ ಸಂಬಳವೂ ಸಿಗುತ್ತಿತ್ತು. ಅವನು ತನ್ನ ತಾಯಿಯನ್ನೂ, ತಮ್ಮ ತಂಗಿಯರನ್ನೂ ತನ್ನೊಂದಿಗೆ ನಗರಕ್ಕೆ ಕರೆದೊಯ್ಯಬೇಕೆಂದು ಮಾಡಿದನು. ಆದರೆ ಶಾಂತಮ್ಮ ಅದಕ್ಕೆ ಒಪ್ಪಲಿಲ್ಲ. ನಗರದಲ್ಲಿ ಖರ್ಚು ಹೆಚ್ಚಾಗಿ ಉಳಿತಾಯಮಾಡಲು ಸಾಧ್ಯವಾಗದೆಂದು ಹೇಳಿ, ಗ್ರಾಮದಲ್ಲೇ ಇರಲು ಇಷ್ಟಪಟ್ಟಳು. ಕಡೆಗೆ ರಾಮಪ್ಪನು ಸಿಗುವ ಸಂಬಳದಲ್ಲಿ ತನಗೆ ಅಗತ್ಯವಾದಷ್ಟೇ ಇಟ್ಟುಕೊಂಡು ಉಳಿದುದನ್ನೆಲ್ಲ ತಾಯಿಗೇ ತಂದುಕೊಡುತ್ತಿದ್ದನು. ಅದರಿಂದ ಶಾಂತಮ್ಮ ಮನೆಗೆ ಬೇಕಾದುವುಗಳನ್ನು ಕೊಂಡುಕೊಂಡು, ಮಗನ ಅಂತಸ್ತಿಗೆ ತಕ್ಕ ಹಾಗೆ ಮನೆಯನ್ನು ಸೊಗಸಾಗಿ ಇಟ್ಟುಕೊಳ್ಳುತ್ತಿದ್ದಳು. ಮೊದಮೊದಲು ಅವಳು ಧನಿಕರಲ್ಲಿ ಅಡಿಗೇಮಾಡುವ ಕೆಲಸ ಬಿಡಲಿಲ್ಲ. ಮಗನು ಒತ್ತಾಯಮಾಡಿ ಹೇಳಿದ ಮೇಲೆ ಪರರ ಮನೆಗೆ ಚಾಕರಿಗೆ ಹೋಗುವುದನ್ನು ಬಿಟ್ಟಳು. ಅವಳ ಎರಡನೆಯ ಮಗ ಶಾಂತಪ್ಪ ಏನೋ ವೃತ್ತಿ ವಿದ್ಯೆ ಅಭ್ಯಾಸಮಾಡ ತೊಡಗಿದನು. ಅದರಲ್ಲಿ ಅವನಿಗೆ ಸ್ವಲ್ಪ ಹಣವೂ ಸಿಗುತ್ತಿತ್ತು. ಕಮಲೆ ಹೊಲಿಗೆಯನ್ನೂ ಸಂಗೀತವನ್ನೂ ಕಲಿಯ ತೊಡಗಿದಳು.

ರಾಮಪ್ಪನು ಪ್ರತಿ ವಾರವೂ ಮನೆಗೆ ಬರುತ್ತಿದ್ದನು. ಒಂದುಸಾರಿ ಹೀಗೆಯೇ ಅವನು ಮನೆಗೆ ಬಂದಾಗ ಮನೆಯಲ್ಲಿ ಯಾವಳೋ ಧನಿಕ ಹೆಂಗುಸೊಬ್ಬಳು

ಆರ್. ಎಸ್. ನಾರಾಯಣಮೂರ್ತಿ

ಇರುವುದನ್ನು ನೋಡಿದನು. ಶಾಂತಮ್ಮ ರಾಮಪ್ಪನಿಗೆ ಆ ಹೆಂಗುಸಿನ ಪರಿಚಯ ಮಾಡಿಸುತ್ತ, "ಇವರು ನಿನ್ನ ಅಪ್ಪನಿಗೆ ಅಕ್ಕ, ನಿನ್ನ ಅತ್ತೆ. ಅವರ ಮಗಳನ್ನು ನಿನಗೆ ಕೊಡಬೇಕು ಅಂತ ಕೇಳಲು ಬಂದಿದ್ದಾರೆ" ಎಂದಳು ಹೆಮ್ಮೆಯಿಂದ.

ರಾಮಪ್ಪ "ಓಹೋ" ಎಂದಷ್ಟೇ ಹೇಳಿ ಮಾತಾಡದೆ ಹೋಗಿಬಿಟ್ಟನು. ರಾತ್ರಿಯಲ್ಲಿ ರಾಮಪ್ಪ ತಾಯಿಯೊಂದಿಗೆ, "ಅಮ್ಮಾ, ಇಷ್ಟು ಕಾಲದವರೆಗೆ ನಮಗೆ ಪರಿಚಯವಿಲ್ಲದ ಬಂಧುಗಳು ಈಗ ನನಗೆ ಹುಡುಗಿ ಕೊಡಲು ಬರುತ್ತಾರೆಂದರೆ ಅದು ನಮ್ಮ ಮೇಲಿನ ಬಾಂಧವ್ಯದ ಅಭಿಮಾನದಿಂದೇನೂ ಅಲ್ಲ ಬಿಡು. ನನ್ನನ್ನು ತಮ್ಮವನನ್ನಾಗಿ ಮಾಡಿಕೊಂಡು, ನಿಮ್ಮಿಂದ ನನ್ನನ್ನು ಬೇರೆಮಾಡಿಕೊಳ್ಳುವುದೇ ಅದರ ಒಳಗುಟ್ಟು. ನನಗೆ ಇಂತಹ ಸಂಬಂಧ ಬೇಡಮ್ಮ" ಎಂದನು, ಪಕ್ಕದ ಕೋಣೆಯಲ್ಲಿರುವ ಅತ್ತೆಯ ಕಿವಿಗೆ ಬೀಳುವ ಹಾಗೆಯೇ. ಬೆಳಗಾದ ಕೂಡಲೇ ಆ 'ಅತ್ತೆ' ಹೊರಟು ಹೋಗಿಬಿಟ್ಟಳು.

ಒಂದು ವಾರದ ಅನಂತರ ಮತ್ತೊಮ್ಮೆ ರಾಮಪ್ಪನು ಮನೆಗೆ ಬಂದಾಗ, ಯಾವನೋ ಒಬ್ಬನು ಕುರ್ಚಿಯಲ್ಲಿ ಕುಳಿತುಕೊಂಡು ಪತ್ರಿಕೆಯನ್ನು ಓದುತ್ತಿದ್ದನು. ಅವನ ಅವತಾರ ನೋಡಿದರೆ ಭಾರಿ ಧನಿಕನಂತೆ ಕಾಣುತ್ತಿತ್ತು. ಅವನು ರಾಮಪ್ಪನನ್ನು ನೋಡಿ, "ಏನೋಯ್, ರಾಮೂ! ಈಗ ತಾನೇ ಬರುವಿಯಾ?" ಎಂದು ಮಾತಾಡಿಸಿದನು. ಅವನು ಯಾರೆಂದು ರಾಮಪ್ಪನಿಗೆ ಗೊತ್ತಾಗಲಿಲ್ಲ.

ಅಷ್ಟರಲ್ಲಿ ಒಳಗಿನಿಂದ ಶಾಂತಮ್ಮ ಬಂದು, "ಇವರು ನನ್ನ ಚಿಕ್ಕಮ್ಮನ ಮಗ ನಾಗರಾಜ. ತನ್ನ ಮಗಳನ್ನು ನಿನಗೆ ಕೊಡಬೇಕು ಅಂತ ಕೇಳಲು ಬಂದಿದಾನೆ. ಹುಡುಗಿ ಚೆನ್ನಾಗಿಯೇ ಇರುತ್ತಾಳೆ. ನಾನು ಕೆಲವು ವರ್ಷಗಳ ಹಿಂದೆ ಹುಡುಗಿನ ನೋಡಿದ್ದೆ" ಎಂದು ಪರಿಚಯ ಮಾಡಿಸಿದಳು.

ಆ ಮಾತಿಗೆ ರಾಮಪ್ಪ ತಾಯಿಯೊಂದಿಗೆ, "ಅಮ್ಮಾ, ನಾನು ಈಗ ತಾನೇ ಎರಡು ಕಾಲಲ್ಲಿ ನಿಲ್ಲಲು ಪ್ರಾರಂಭಿಸಿದ್ದು. ಈಗಲೇ ಮದುವೆಮಾಡಿ



ಕೊಳ್ಳಲಾರೆ. ಮೊದಲು ತಂಗಿ ಕಮಲೆಯ ಮದುವೆಯಾಗಲಿ" ಎಂದು ಹೇಳಿ ನಾಗರಾಜನೊಂದಿಗೆ, "ಅಲ್ಲಯ್ಯಾ, ನಾಗರಾಜ ಮಾವಯ್ಯಾ! ಇಷ್ಟು ವರ್ಷಗಳ ಮೇಲೆ ನಮ್ಮ ಜ್ಞಾಪಕ ನಿಮಗೆ ಬಂತಲ್ಲ, ಬಹಳ ಸಂತೋಷ. ನಾಲ್ಕು ದಿನ ಇದ್ದು ಹೋಗಬೇಕು. ಇರುವಿರಷ್ಟೆ?" ಎಂದನು.

"ಅದಕ್ಕೇನೂ ಪರವಾಗಿಲ್ಲ ಬಿಡೂ. ನಾನು ಆಗಾಗ ಒಂದುಸಾರಿ ನಿಮ್ಮನ್ನೆಲ್ಲಾ ಬಂದು ನೋಡಿ ಹೋಗಬೇಕೆಂತಲೇ ಇದ್ದೆ. ಬಿಡುವೇ ಸಿಗಲಿಲ್ಲ. ನಗರದಲ್ಲಿ ಅವಸರದ ಕೆಲಸವಿದೆ. ಮತ್ತೊಮ್ಮೆ ಮಾತಾಡೋಣ. ಹೋಗಿ ಬರುತ್ತೇನೆ" ಎಂದು ನಾಗರಾಜನು ಹೊರಟುಹೋದನು.

ಮಾಘಮಾಸ ಬಂದಿತು. ಶಾಂತಮ್ಮನ ತಂಗಿಯ ಮದುವೆಗಾಗಿ ಎಲ್ಲರೂ ಅಲ್ಲಿಗೆ ಹೋದರು. ಮದುವೆಯ ದಿನ ರಾತ್ರಿ ಶಾಂತಮ್ಮನೂ ಅವಳ ಮಕ್ಕಳೂ ಒಂದು ಕೋಣೆಯಲ್ಲಿ ಮಲಗಿದ್ದರು. ಅಲ್ಲಲ್ಲಿ ಇನ್ನೂ ಅನೇಕರು ಮಲಗಿದ್ದರು. ಹೊಸ ಸ್ಥಳವಾದುದರಿಂದ ರಾಮಪ್ಪನಿಗೆ ನಿದ್ದೆ ಹಿಡಿಯಲಿಲ್ಲ. ಸುಮ್ಮನೆ ಹೊರಳಾಡಿಕೊಂಡಿದ್ದನು.

ಸುಮಾರು ಅರ್ಧ ರಾತ್ರಿಯ ಹೊತ್ತಿಗೆ ಯಾರದೋ ಸಂಭಾಷಣೆ ಅವನ ಕಿವಿಗೆ ಬಿತ್ತು. ಅವನು ತಾಯಿಯನ್ನು ತಟ್ಟಿ ಎಬ್ಬಿಸಿ, ಮಾತಾಡದೆ ಅವರ ಮಾತುಗಳನ್ನು ಕೇಳುವಂತೆ ಸಂಜ್ಞೆ ಮಾಡಿದನು.

"ಆ ಶಾಂತಮ್ಮನ ಹತ್ತಿರ ನಮ್ಮ ಮಗಳ ಸಂಬಂಧವನ್ನು ವಿಚಾರಿಸಬಾರದೇನ್ರೀ! ಸಮ್ಮನಿರುವಿರಲ್ಲಾ?" ಎಂದವಳು ಹೆಂಡತಿ.

"ಛೀ ಛೀ! ಆ ಅಡಿಗೇ ಹೆಂಗುಸಿನ ಮಗನೇ? ನಮಗೆ ಕೂಡಿ ಬಾರದು" ಎಂದನು ಅವಳಗಂಡ.

"ಹುಡುಗ ಚೆನ್ನಾಗಿದ್ದಾನೇ ಅಂದ್ರೇ! ನಗರದಲ್ಲಿ ಒಳ್ಳೆಯ ಉದ್ಯೋಗವಂತೆ! ಚೆನ್ನಾಗಿ ಸಂಪಾದಿಸ್ತಾನಂತೆ. ಅವನ ಅಮ್ಮ ಅಡಿಗೇ ಹೆಂಗುಸಾದರೇನಾಯಿತು? ಮದುವೆಯಾದ ಮೇಲೆ ನಮ್ಮ ಹುಡುಗಿ ಅವನನ್ನು ತಾಯಿಯ ಕೈಯಿಂದ ಬಿಡಿಸದೆ ಬಿಡುತ್ತಾಳೆಯೇ?" ಎಂದಳು ಹೆಂಡತಿ.



ಇಷ್ಟೆಲ್ಲ ಅನುಭವ ಪಡೆದ ಮೇಲೆ ಶಾಂತಮ್ಮ ತನ್ನ ಹತ್ತಿರ ಯಾರು ಬಂದು ಮಗನ ಮದುವೆಯ ಪ್ರಸ್ತಾವ ಎತ್ತಿದರೂ, ಅವನೀಗ ಮದುವೆ ಮಾಡಿ ಕೊಳ್ಳುವುದಿಲ್ಲವಂತೆ ಎಂದು ಹೇಳುತ್ತಿದ್ದಳು.

ಒಂದು ಸಾರಿ ರಾಮಪ್ಪ ತಾಯಿಯೊಂದಿಗೆ, "ಅಮ್ಮಾ, ಅಪ್ಪಾ ರಾಯರು ಕುಮಲೆಗೆ ಒಳ್ಳೆಯ ಸಂಬಂಧ ತಂದಿದ್ದಾರೆ. ಮದುವೇ ಮನೇಲಿ ಅವನು ಕಮಲೆಯನ್ನು ನೋಡಿದ್ದಾನಂತೆ. ಕಡಿಮೆ ಖರ್ಚಿನಲ್ಲೇ ಮದುವೆ ಮಾಡ ಬಹುದೆಂದು ಹೇಳಿದ್ದಾರಂತೆ. ಮದುವೆ ಖರ್ಚಿಗೆ ಹಣ ಸಾಲದೇ ಹೋದರೆ ಅಪ್ಪಾ ರಾಯರೇ ಕೊಟ್ಟು ಸರಿ ಮಾಡುತ್ತಾರಂತೆ" ಎಂದನು ಉತ್ಸಾಹದಿಂದ.

"ನಾವು ಅಪ್ಪಾರಾಯರಿಗೆ ತುಂಬಾ ಋಣ ಪಟಿದ್ದೇವೆ ಮಗಾ! ಅವರ ಸಹಾಯದಿಂದಲೇ ನೀನು ಇಷ್ಟರವರೆಗೆ ಬಂದಿದ್ದೀ" ಎಂದಳು ಶಾಂತಮ್ಮ.

"ಹೌದಮ್ಮ. ನನ್ನ ಆಲೋಚನೆ ಏನೆಂದರೆ, ಅಪ್ಪಾರಾಯರ ಮಗಳು ಸೀತೆಯನ್ನು ನಾನು ಮಾಡಿ ಕೊಂಡರೆ ಆ ಋಣ ಸ್ವಲ್ಪಾದರೂ ತೀರುತ್ತದೋ ಏನೋ!" ಎಂದನು ರಾಮಪ್ಪ.

"ನಿಜವಾಗಿಯೂ ಹೇಳುವಿಯೇನೋ?" ಎಂದು ಶಾಂತಮ್ಮ ಆಶ್ಚರ್ಯದಿಂದ ಮಗನನ್ನು ನೋಡಿದಳು. ಆ ಸೀತೆ ಚಿಕ್ಕತನದಲ್ಲಿ ಬಾಲಪಕ್ಷವಾತವು ಬಂದು ಕುಂಟಿಕಾಲಿನವಳಾಗಿದ್ದಳು. ಆದರೇನು? ತುಂಬಾ ಬುದ್ಧಿವಂತೆ! ಕೆಲಸಕಾರ್ಯಗಳನ್ನು ಚುರುಕಾಗಿ ಮಾಡುತ್ತಿದ್ದಳು. ಮಧುರವಾಗಿ ಮಾತಾಡುವಳು.

ಶಾಂತಮ್ಮ ಅಪ್ಪಾರಾಯರ ಮನೆಗೆ ಹೋಗಿ ತನ್ನ ಮಗನ ಕೋರಿಕೆಯನ್ನು ಹೇಳಿದಳು. "ಅದು ಅವನ ಹುಡುಗುತನದ ದುಡುಕು ಬುದ್ಧಿಯೋ ಏನೋ? ಸ್ವಲ್ಪ ನಿಧಾನವಾಗಿ ಆಲೋಚಿಸುವಂತೆ ಹೇಳಿರಮ್ಮ" ಎಂದರು ಅಪ್ಪಾರಾಯರು.

"ಇಲ್ಲ ಅಣ್ಣಯ್ಯಾ. ಇನ್ನು ಆಲೋಚಿಸಲು ಏನೂ ಇಲ್ಲ. ನಮ್ಮ ಸಂಬಂಧದವರು ಅನೇಕರು ಮಗಳನ್ನು ಕೊಡಲು ಬಂದರು. ತಾನು ಸ್ವಲ್ಪ ಒಳ್ಳೆಯ ಸ್ಥಿತಿಯಲ್ಲಿರುವುದನ್ನು ನೋಡಿ ಬಂದು ಮಾತಾಡಿಸುವ ಸಂಬಂಧಿಕರನ್ನು ಕಂಡರೆ ಅವನಿ ಗಾಗುವುದಿಲ್ಲ. ಅವನ ಉದ್ದೇಶದಲ್ಲಿ ನಿಮ್ಮ ಹಾಗೆ ಅಡಿಗಡಿಗೂ ಸಹಾಯ ಮಾಡುವವರೇ ನಿಜವಾದ ಸಂಬಂಧಿಕರು. ಅವನು ಚೆನ್ನಾಗಿ ಆಲೋಚನೆ ಮಾಡಿಯೇ ಸೀತೆಯನ್ನು ಮದುವೆಯಾಗಲು ಸಿದ್ಧ ನಾಗಿದ್ದಾನೆ. ನೀವು ಸಂತೋಷದಿಂದ ಒಪ್ಪಿಬಿಡಿ" ಎಂದಳು ಶಾಂತಮ್ಮ.

ಒಂದು ಶುಭ ಮುಹೂರ್ತದಲ್ಲಿ ಕಮಲೆಗೆ ಮದುವೆ ಯಾಯಿತು. ಅದರ ಬೆನ್ನಿಗೇ ರಾಮಪ್ಪ ಸೀತೆಯರ ಮದುವೆಯೂ ಆಯಿತು.





# ಚಿಕ್ಕಸೆಟ್ಟಿಯ ಶಿಷ್ಯ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದಾಗ ಬೋಧಿಸತ್ವನು ಶ್ರೇಷ್ಠಿಯ ಕುಲದಲ್ಲಿ ಹುಟ್ಟಿ "ಚಿಕ್ಕಸೆಟ್ಟಿ" ಎಂದು ಕರೆಯಲ್ಪಟ್ಟನು. ಚಿಕ್ಕ ಪ್ರಾಯದಲ್ಲಿ ಮುದ್ದಿನಿಂದ ಕರೆದ ಆ ಹೆಸರೇ ಸ್ಥಿರವಾಗಿ ಹೋಯಿತು. ಅವನು ಶಕುನ ಶಾಸ್ತ್ರ ತಿಳಿದವನಾಗಿ ರಾಜನ ಸಭೆಯಲ್ಲಿ "ಶ್ರೇಷ್ಠಿ" ಪದವಿಯ ಸದಸ್ಯನಾಗಿಯೂ ಇದ್ದನು.

ಒಂದು ದಿನ ಚಿಕ್ಕಸೆಟ್ಟಿ ರಾಜ ಸಭೆಗೆ ಹೋಗುತ್ತಿದ್ದಾಗ, ದಾರಿಯಲ್ಲಿ ಬಿದ್ದಿದ್ದ ಒಂದು ಸತ್ತ ಇಲಿಯನ್ನು ನೋಡಿ, "ಇನ್ನೂ ಈ ಇಲಿಯನ್ನು ಕಾಗೆ ಮುಟ್ಟಿಲ್ಲವೆಂದರೆ ಇದು ಅದೃಷ್ಟದ ಇಲಿಯೇ ನಿಜ. ಯಾವನಾದರೂ ಅದೃಷ್ಟವುಳ್ಳ ಬುದ್ಧಿವಂತ ಇದರಿಂದ ಏನಾದರೂ ವ್ಯಾಪಾರ ಪ್ರಾರಂಭಿಸಿದರೆ ಧನಿಕನಾಗಿ ಕಡೆಗೆ ಒಳ್ಳೆಯ ಹೆಣ್ಣನ್ನು ಮದುವೆ ಮಾಡಿಕೊಂಡಾನು" ಎಂದು ತನಗೆ ತಾನೇ ಹೇಳಿಕೊಂಡಂತೆ ಹೇಳಿದನು.

ಆ ಮಾತುಗಳು ಅವನ ಬದಿಯಲ್ಲಿದ್ದ ಒಬ್ಬ ಯುವಕನಿಗೆ ಕೇಳಿಸಿತು. ಅವನು ಒಳ್ಳೆಯ ಕುಟುಂಬದಲ್ಲಿ ಹುಟ್ಟಿದವನಾದರೂ ಬಹಳ ಬಡವನಾಗಿದ್ದ. ಅವನು ಚಿಕ್ಕಸೆಟ್ಟಿಯ ಶಕುನದ ಮಾತನ್ನು ನಂಬಿ ಆ ಸತ್ತ ಇಲಿಯನ್ನು ಎತ್ತಿಕೊಂಡು ಹೋದನು.

ಒಂದು ಅಂಗಡಿಯವನು ಬೆಕ್ಕನ್ನು ಪ್ರೀತಿಸುವ ವಿಷಯ ಅವನಿಗೆ ಗೊತ್ತು. ಯುವಕನು ಇಲಿಯನ್ನು ಅವನಿಗೆ ತೋರಿಸಿ, "ಈ ಸತ್ತ ಇಲಿಯನ್ನು ಕಾಲಾಣೆ ಕೊಟ್ಟು ತಕ್ಕೊಂಡು ನಿಮ್ಮ ಬೆಕ್ಕಿಗೆ ಕೊಡಿರಿ ಸ್ವಾಮಿ" ಎಂದನು. ಅಂಗಡಿಯವನು ಹಾಗೆಯೇ ಕೊಟ್ಟು ಇಲಿಯನ್ನು ಕೊಂಡುಕೊಂಡನು.

ಯುವಕನು ಆ ಕಾಲಾಣೆಗೆ ಒಂದು ಬೆಲ್ಲದ ಅಚ್ಚನ್ನು ಕೊಂಡುಕೊಂಡು ಅದನ್ನು ತುಂಡುತುಂಡು ಮಾಡಿ, ಒಂದು ಗಡಿಗೆಯಲ್ಲಿ ನೀರನ್ನು ಇಟ್ಟುಕೊಂಡು, ಕಾಡಿಗೆ ಹೋಗುವ ಮಾರ್ಗದಲ್ಲಿ ಕುಳಿತನು. ಕಾಡಿನಿಂದ ಹೂವುಗಳನ್ನು ಸಂಗ್ರಹಿಸಿ ಮಾಲೆಕಟ್ಟಿಕೊಂಡು ಬರುವ ಮಾಲಾಕಾರರೂ, ಅವನ ಬಳಿಯಲ್ಲಿ ನಿಂತು ಬೆಲ್ಲತಿಂದು ನೀರುಕುಡಿದರು. ಪ್ರತಿಫಲವಾಗಿ ಒಬ್ಬೊಬ್ಬರೂ ಒಂದೊಂದು ಮುಷ್ಟಿ ಹೂವನ್ನು ಯುವಕನಿಗೆ ಕೊಟ್ಟರು. ಯುವಕನು ಆ ಹೂಗಳನ್ನು ಕೆಲವು ಮನೆಗಳಲ್ಲಿ ಮಾರಿ ಹಣ ಮಾಡಿಕೊಂಡನು. ಮರುದಿನ ಅವನು ಇನ್ನಿಷ್ಟು



ಕೂಡಲೇ ಆ ಜಾಣ ಯುವಕನು ಮಕ್ಕಳು ಆಡಿಕೊಳ್ಳುವ ಸ್ಥಳಕ್ಕೆ ಹೋಗಿ, ಎಲ್ಲರಿಗೂ ಒಂದೊಂದು ತುಂಡು ಬೆಲ್ಲ ಕೊಟ್ಟು, ಅವರಿಂದ ಉದ್ಯಾನದಲ್ಲಿ ಉದುರಿಬಿದ್ದ ಕೊಂಬೆರೆಂಬೆ ದರಲೆಗಳನ್ನು ಬಳಿಸಿ ರಾಶಿ ಮಾಡಿಸಿ ಪ್ರವೇಶ ದ್ವಾರದ ಹತ್ತಿರ ಸೇರಿಸಿದನು.

ಆ ಸಮಯದಲ್ಲಿ ರಾಜನ ಮನೆಗೆ ಭಾಂಡಗಳನ್ನು ಮಾಡುವ ಕುಂಬಾರನು ಆ ದಾರಿಯಾಗಿ ಬಂದನು. ಉದ್ಯಾನದ ಪ್ರವೇಶ ದ್ವಾರದಲ್ಲಿದ್ದ ಉರುವಲ ರಾಶಿಯನ್ನು ನೋಡಿ ಅವನು ಅದಕ್ಕೊಂದು ಬೆಲೆಯನ್ನು ಕಟ್ಟಿ ಅದನ್ನೆಲ್ಲಾ ಕೊಂಡುಕೊಂಡನು. ಗಡಿಗೆಗಳನ್ನು ಬೇಯಿಸಲು ಅದು ಒಳ್ಳೆಯ ಉರುವಲಾಯಿತು. ಈ ವ್ಯಾಪಾರದಲ್ಲಿ ಯುವಕನಿಗೆ ಇಪ್ಪತ್ತಾರು ಕಾರ್ಷಾಪಣಗಳೂ, ಕೆಲವು ಮಡಿಕೆಗಳೂ ಸಿಕ್ಕಿದುವು.

ಆಗ ಯುವಕನಿಗೆ ಒಂದು ಅಲೋಚನೆ ಬಂದಿತು. ಅವನು ಆ ನಗರ ದ್ವಾರಕ್ಕೆ ಸಮೀಪದಲ್ಲಿದ್ದ ಹುಲ್ಲುಗಾವಲಿಗೆ ಹೋಗಿ, ಐನೂರು ಮಂದಿ ಹುಲ್ಲು ಕೊಯ್ಯುವವರಿಗೆ ಕುಡಿಯಲು ಬೆಲ್ಲ ನೀರು ಕೊಟ್ಟು ಸಂತೋಷಪಡಿಸಿದನು. "ನಿನಗೇನು ಸಹಾಯಮಾಡಬೇಕಪ್ಪಾ?" ಎಂದು ಅವರೆಲ್ಲಾ ಕೇಳಿದರು. ಬೇಕಾದಾಗ ಸಹಾಯ ಕೇಳುತ್ತೇನೆಂದು ಅವರೊಂದಿಗೆ ಹೇಳಿದನು ಯುವಕ, ದಿನಾ ಬೆಲ್ಲ ನೀರು ಕೊಡುತ್ತಾ.

ಆ ಮೇಲೆ ಒಂದು ದಿನ ಆ ಯುವಕನಿಗೆ ಒಬ್ಬ ವರ್ತಕನ ಮೂಲಕವಾಗಿ, ಮರುದಿನ ಆ ನಗರಕ್ಕೆ ಕುದುರೆಯ ವರ್ತಕನೊಬ್ಬನು ಐನೂರು ಕುದುರೆಗಳನ್ನು ತರುವನೆಂದು ಗೊತ್ತಾಯಿತು. ಕೂಡಲೇ ಯುವಕನು ಹುಲ್ಲುಗಾವಲಿನವರನ್ನು ಸಂಧಿಸಿ, "ನಾಳೆ ನೀವೆಲ್ಲರೂ ನನಗೆ ತಲಾ ಒಂದೊಂದು ಹೊರೆ ಹುಲ್ಲನ್ನು ಕೊಡಬೇಕು. ನನ್ನ ಹುಲ್ಲು ಮುಗಿಯುವವರೆಗೂ ನೀವು ಹುಲ್ಲು ಮಾರಬಾರದು" ಎಂದನು. ಅದಕ್ಕೆ ಒಪ್ಪಿ ಅವರೆಲ್ಲ ಅವನ ಮನೆಯ ಮುಂದೆ ಐನೂರು ಹುಲ್ಲು ಕಟ್ಟುಗಳನ್ನು ತಂದು ಹಾಕಿದರು.

ಬೆಲ್ಲದ ಅಚ್ಚುಗಳನ್ನು ಕೊಂಡುಕೊಂಡು, ನೀರಿನೊಂದಿಗೆ ಹೋಗಿ ಅದೇ ಸ್ಥಳದಲ್ಲಿ ಕುಳಿತುಕೊಂಡನು. ಈಸಾರಿ ಬಂದ ಮಾಲಾಕಾರರು ಅವನಿಗೆ ಹೂವುಗಳೊಂದಿಗೆ, ಕೆಲವು ಹೂವಿನ ಗಿಡಗಳನ್ನು ಕೂಡಾ ತಂದುಕೊಟ್ಟರು. ಹೀಗೆ ಅವನು ಕೆಲವು ದಿನಗಳಲ್ಲಿ ಎಂಟು ಕಾರ್ಷಾಪಣಗಳೆಂಬ ಬೆಳ್ಳಿ ನಾಣ್ಯಗಳನ್ನು ಸಂಪಾದಿಸಿಕೊಂಡನು.

ಒಂದು ದಿನ ಜೋರಾಗಿ ಗಾಳಿ ಮಳೆ ಬಂದಿತು. ರಾಜೋದ್ಯಾನದಲ್ಲಿ ಒಣಗಿದ ಕೊಂಬೆಗಳೂ ಎಲೆಗಳೂ ವಿಪರೀತವಾಗಿ ಉದುರಿಬಿದ್ದುವು. ತೋಟಗಾರನು ಹೇಗೆ ಉದ್ಯಾನವನ್ನು ಶುದ್ಧಮಾಡುವುದೆಂದು ಆಲೋಚಿಸಿಕೊಂಡಿರುವಾಗ, ಯುವಕನು ಅವನ ಬಳಿಗೆ ಹೋಗಿ ಅಲ್ಲಿ ಉದುರಿದ ಕೊಂಬೆರೆಂಬೆ ದರಲೆಗಳನ್ನು ತನಗೆ ಕೊಡುವ ಪಕ್ಷದಲ್ಲಿ ತಾನು ಉದ್ಯಾನವನ್ನು ಶುಭ್ರಮಾಡಿ ಕೊಡುತ್ತೇನೆಂದನು. ಅದಕ್ಕೆ ಒಪ್ಪಿದನು ತೋಟಗಾರ.

ವರ್ತಕನು ಐನೂರು ಕುದುರೆಗಳೊಂದಿಗೆ ಬಂದನು. ಅವನಿಗೆ ಬೇಕಾದ ಹುಲ್ಲು ಬೇರೆಲ್ಲಿಯೂ ದೊರೆಯದೆ, ಯುವಕನ ಹತ್ತಿರವಿದ್ದ ಐನೂರು ಹುಲ್ಲುಕಟ್ಟುಗಳನ್ನೂ ಕೊಂಡುಕೊಂಡು, ಸಾವಿರ ಕಾರ್ಷಾಪಣಗಳನ್ನು ಕೊಟ್ಟನು. ಮತ್ತೆ ಕೆಲವು ದಿನಗಳ ಮೇಲೆ ಆ ಯುವಕನಿಗೆ, ಪರಿಚಯದ ವ್ಯಾಪಾರಿಯ ಮೂಲಕ, ದೊಡ್ಡದೊಂದು ಸರಕು ತುಂಬಿದ ನಾವೆ ರೇವಿಗೆ ಬರುವುದೆಂಬ ಸಮಾಚಾರ ಗೊತ್ತಾಯಿತು. ಕೂಡಲೇ ಅವನು ಒಂದು ಹೊಸ ಆಲೋಚನೆ ಮಾಡಿಕೊಂಡು, ಎಂಟು ಕಾರ್ಷಾಪಣಗಳಿಗೆ ಉತ್ತಮವಾದೊಂದು ಗಾಡಿಯನ್ನು ಬಾಡಿಗೆಗೆ ತೆಗೆದುಕೊಂಡು ಅದರಲ್ಲಿ ಕುಳಿತು ರೇವಿಗೆ ಹೋದನು. ನಾವೆಯಲ್ಲಿದ್ದ ಎಲ್ಲಾ ಸರಕುಗಳನ್ನೂ ತಾನೇ ಕೊಂಡುಕೊಳ್ಳುವೆನೆಂದು ಹೇಳಿ ಬೆಲೆ ನಿರ್ಣಯಮಾಡಿ, ಒಂದು ಉಂಗುರವನ್ನು ಮುಂಗಡವಾಗಿ ಕೊಟ್ಟನು. ತರುವಾಯ ಮೂವರು ಪ್ರತೀಹಾರಿಗಳನ್ನು ಆ ನಾವೆಯ ಹತ್ತಿರ ನಿಯಮಿಸಿ, ವರ್ತಕರಾರಾದರೂ ಬಂದರೆ, ತನ್ನ ಬಳಿಗೆ ಕರೆದು ತರುವಂತೆ ಅವರಿಗೆ ಹೇಳಿದನು.

ಅಷ್ಟರಲ್ಲಿ ಆ ನಾವೆ ರೇವಿಗೆ ಬಂದಿರುವ ಸಮಾಚಾರ ತಿಳಿದು, ಕಾಶೀ ನಗರದಲ್ಲಿದ್ದ ನೂರುಮಂದಿ ವರ್ತಕರು ಸರಕುಗಳನ್ನು ಕೊಂಡುಕೊಳ್ಳಲು ಬಂದರು. ಆಗಲೇ ಆ ಸರುಕುಗಳನ್ನೆಲ್ಲಾ ಯಾವನೋ ಯುವಕನು ಕೊಂಡುಕೊಂಡ ಸಂಗತಿ ಅವರಿಗೆ ಗೊತ್ತಾಯಿತು. ವರ್ತಕರು ಆ ಯುವಕನ ಬಳಿಗೆ ಬಂದರು.

ಯುವಕನು ಅವರೊಂದಿಗೆ ಚೌಕಾಸಿಮಾಡಿ, ನಾವೆಯ ಸರಕುಗಳನ್ನೆಲ್ಲಾ, ನಾಲ್ಕು ನಾಲ್ಕು ಸಾವಿರ ಕಾರ್ಷಾಪಣಗಳಿಗೆಅವರಿಗೆ ಹಂಚಿಕೆಮಾಡಿ ಮಾರಿದನು. ನಾವೆಯ ಅಧಿಪತಿಗೆ ನಿರ್ಣಯಿಸಿದ ಬೆಲೆಯನ್ನೂ ಕೊಟ್ಟನು. ಯುವಕನಿಗೆ ಎರಡು ಲಕ್ಷ ಸಂಪಾದನೆಯಾಯಿತು. ತರುವಾಯ ಆ ಯುವಕನು ಚಿಕ್ಕಸೆಟ್ಟಿಯ ಬಳಿಗೆ ಹೋಗಿ, ಎರಡು ಲಕ್ಷಗಳನ್ನೂ ತೋರಿಸಿ, "ನಿಮ್ಮಿಂದ ಇಷ್ಟು ಸಂಪಾದನೆಯಾಯಿತು" ಎಂದನು.

"ಅದು ಹೇಗೇ? ನಾನೇನು ಮಾಡಿದೆ?" ಎಂದು ಚಿಕ್ಕಸೆಟ್ಟಿ ಕೇಳಿದನು. "ನಿಮ್ಮ ಉಪದೇಶದ ಮೂಲಕವಾಗಿ ನಾಲ್ಕು ತಿಂಗಳ ಕಾಲದಲ್ಲಿ ಈ ಹಣ ಸಂಪಾದನೆಯಾಯಿತು!" ಎಂದು ಯುವಕನು, ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ಅದನ್ನು ಕೇಳಿ ಚಿಕ್ಕಸೆಟ್ಟಿ ತಲೆದೂಗುತ್ತ, ಇಂತಹ ಹುಡುಗನನ್ನು ಬೇರೆಯವರ ಕೈಗೆ ಬಿಡಬಾರದು!" ಎಂದುಕೊಂಡು, ಮದುವೆಗೆ ಸಿದ್ಧವಾಗಿದ್ದ ತನ್ನ ಮಗಳನ್ನು ಆ ಯುವಕನಿಗೇ ಕೊಟ್ಟು ಮದುವೆಮಾಡಿ, ತನಗಿರುವ ಆಸ್ತಿಯನ್ನೆಲ್ಲಾ ಅವನ ಸ್ವಾಧೀನ ಮಾಡಿದನು. ಚಿಕ್ಕಸೆಟ್ಟಿ ತೀರಿಹೋದ ಮೇಲೆ ಆ ಯುವಕನೇ "ಶ್ರೇಷ್ಠಿ" ಪದವಿಯನ್ನು ಅಲಂಕರಿಸಿದನು.






# ಅಜೇಯನಾದ ಬುದ್ಧ

ಬುದ್ಧನ ಜ್ಞಾತಿಯಾದ ದೇವದತ್ತನು ಬುದ್ಧನಿಗೆ ಶಿಷ್ಯನಾಗಿ ನಟಿಸುತ್ತ, ಬುದ್ಧನ ಮೇಲೆ ಅಸೂಯೆಯಿಂದಿದ್ದನು. ಮಗಧರಾಜ ಕುಮಾರನಾದ ಅಜಾತ ಶತ್ರುವೂ, ದೇವದತ್ತನೂ ಸ್ನೇಹಿತರು. ಅಜಾತಶತ್ರು, ಅವನ ತಂದೆಯಾದ ಬಿಂಬಿಸಾರನನ್ನು ಕೊಲ್ಲುವಂತೆ ದೇವದತ್ತನು ಪ್ರೋತ್ಸಾಹ ಕೊಡುತ್ತಿದ್ದನು. ಹಾಗೆ ಅಜಾತಶತ್ರು ರಾಜನಾಗಿ ಬಿಟ್ಟರೆ, ತನಗೆ ಉನ್ನತಿ ಬರುವುದೆಂದು ದೇವದತ್ತನ ಆಶೆ.

ದೇವದತ್ತನ ಪ್ರೋತ್ಸಾಹದಿಂದ ಅಜಾತಶತ್ರು ಒಂದುದಿನ ಸಮಯನೋಡಿ ಬಿಂಬಿಸಾರನ ಶಯನಾಗಾರವನ್ನು ರಹಸ್ಯವಾಗಿ ಪ್ರವೇಶಿಸಿದನು. ನಿದ್ದೆಯಲ್ಲಿದ್ದ ರಾಜನನ್ನು ಸಮೀಪಿಸಿ ಸುರಿಗತ್ತಿಯನ್ನು ಮೇಲೆತ್ತಿ ರಾಜನನ್ನು ತಿವಿಯಲು ನೋಡಿದನು.





ಆಗ ಕಾಕತಾಲೀಯವಾಗಿ ಸೇವಕನೊಬ್ಬ ಆ ಕೋಣೆಗೆ ಬಂದು ಗಟ್ಟಿಯಾಗಿ ಕೂಗಿದನು. ಅಜಾತ ಶತ್ರುವಿನ ಕೈಯಿಂದ ಕತ್ತಿ ಜಾರಿ ಕೆಳಗೆ ಬಿತ್ತು. ರಾಜನ ಅಂಗರಕ್ಷಕರು ಓಡುತ್ತಾ ಬಂದರು. ಅಜಾತಶತ್ರು ಸುಲಭವಾಗಿ ಅವರ ಕೈಗೆ ಸಿಕ್ಕಿ ಬಿದ್ದನು.



ಈ ದುಷ್ಕಾರ್ಯಕ್ಕೆ ತನ್ನನ್ನು ಪ್ರೇರೇಪಿಸಿದವನು ದೇವದತ್ತನೆಂದು ಅಜಾತಶತ್ರು ಒಪ್ಪಿದನು. ಮಂತ್ರಿಗಳು ಅಜಾತಶತ್ರುವನ್ನು ಶಿಕ್ಷಿಸಬೇಕು ಎಂದರು. ಆದರೆ ರಾಜನು "ನಾನು ವೃದ್ಧನಾದೆ. ಇನ್ನು ವಿರಮಿಸುತ್ತೇನೆ. ನನ್ನ ಮಗನು ರಾಜನಾದ ಮೇಲೆ ಅವನಿಗೆ ಆತ್ಮವಿಶ್ವಾಸ ಉಂಟಾಗುತ್ತದೆ. ದುಷ್ಟರು ಅವನನ್ನು ಪ್ರೇರೇಪಿಸಲಾರರು !" ಎಂದನು.

ಅಜಾತಶತ್ರು ತಂದೆಯ ಕಾಲಿನ ಬುಡದಲ್ಲಿ ಬಿದ್ದು ತಂದೆ ಕೊಡುವ ಕ್ಷಮಾಭಿಕ್ಷೆಗೆ ಅರ್ಹನಾಗಿ ನಡೆದುಕೊಳ್ಳುತ್ತೇನೆಂದು ಹೇಳಿದನು. ಬಿಂಬಿಸಾರನು ಮಗನಿಗೇ ರಾಜ್ಯವನ್ನು ಕೊಟ್ಟು ಬಿಟ್ಟನು. ಆ ಮೇಲೆ ಅಜಾತಶತ್ರು ದೇವದತ್ತನನ್ನು ಅಲಕ್ಷ್ಯ ಮಾಡಿ, ಬುದ್ಧನ ಬೋಧನೆಗಳನ್ನು ಕೇಳ ತೊಡಗಿದನು. ಅವನು ಬೌದ್ಧ ಮತ್ತು ಜೈನ ಎರಡು ಮತಗಳನ್ನೂ ಆದರಿಸಿದನು.





ಅಜಾತಶತ್ರುವಿನಲ್ಲಿ ಉಂಟಾದ ಹೃದಯ ಪರಿವರ್ತನೆಯನ್ನು ನೋಡಿ, ಆಶಾಭಂಗ ಗೊಂಡ ದೇವದತ್ತನು ತಾನೇ ಬುದ್ಧನನ್ನುಕೊಂದು ಬಿಡಬೇಕೆಂದು ನಿಶ್ಚಯಿಸಿ ಕೊಂಡನು. ಬುದ್ಧನು ದಿನಾ ಸಂಧ್ಯಾ ಕಾಲದಲ್ಲಿ ಗುಡ್ಡದ ಬುಡದಲ್ಲಿ ಕಾಲಾಡಿಸುವ ಪದ್ಧತಿಯಿತ್ತು. ಒಂದು ದಿನ ದೇವದತ್ತನು ಗುಡ್ಡದ ಮೇಲಿನಿಂದ ಬುದ್ಧನ ಮೇಲಕ್ಕೆ ಬೀಳುವಂತೆ ದೊಡ್ಡದೊಂದು ಶಿಲೆಯನ್ನು ಉರುಳಿಸಿಬಿಟ್ಟನು.

ಅದೇ ಸಮಯದಲ್ಲಿ ಮತ್ತೊಂದು ಶಿಲೆ ತನ್ನಂತಾನೇ ಕೆಳಗೆ ಹೊರಳುತ್ತ, ಮಧ್ಯ ದಾರಿಯಲ್ಲಿ ಮೊದಲನೇ ಕಲ್ಲಿಗೆ ಒಂದು ಬದಿಯಲ್ಲಿ ಢಿಕ್ಕೊಟ್ಟು, ಅದರ ಮಾರ್ಗವನ್ನು ತಪ್ಪಿಸಿತು. ಎರಡು ಶಿಲೆಗಳೂ ಬುದ್ಧನಿಗೆ ಕೆಲವು ಗಜಗಳಷ್ಟು ದೂರದಲ್ಲಿ ಬಿದ್ದುವು. ಬುದ್ಧನಿಗೆ ಅಪಾಯ ತಪ್ಪಿದರೂ ಅವನ ಪಾದಕ್ಕೆ ಕಲ್ಲಿನ ಚೂರೊಂದು ಹಾರಿಬಂದು ಚುಚ್ಚಿಕೊಂಡಿತು.





ತರುವಾಯ ದೇವದತ್ತನು ನೀಲಗಿರಿ ಎಂಬ ಆನೆಯನ್ನು ಸಾಕುವ ಮಾವಟಿಗನೊಂದಿಗೆ ತಂತ್ರಮಾಡಿದನು. ಆ ಆನೆಗೆ ಮನುಷ್ಯರನ್ನು ತುಳಿದು ಕೊಲ್ಲುವ ದುರಭ್ಯಾಸವಿದ್ದಿತು. ಅವರು ನೀಲಗಿರಿಗೆ ಮಾದಕ ಪಾನೀಯವನ್ನು ಚೆನ್ನಾಗಿ ಕುಡಿಸಿದರು. ಬುದ್ಧನು ಬೀದಿಗೆ ಬರುವ ಮೊದಲು ಅವರು ಈ ಕೆಲಸ ಮಾಡಿಬಿಟ್ಟರು.

ಚೆನ್ನಾಗಿ ಮದವೇರಿದ ನೀಲಗಿರಿ ಆನೆಯನ್ನು ಅವರು ಬೀದಿಗೆ ಬಿಟ್ಟರು. ಅದನ್ನು ನೋಡಿ ಬೀದಿಯ ಜನರೆಲ್ಲಾ ಹೆದರಿ ಚೆಲ್ಲಾ ಚೆದರಾಗಿ ಓಡಿದರು. ಬುದ್ಧನು ಶಿಷ್ಯರು ಬುದ್ಧನನ್ನು ರಕ್ಷಿಸಲಿಕ್ಕಾಗಿ ಮುಂದಕ್ಕೆ ಹೋಗಲು ನೋಡಿದರು. ಆದರೆ ಬುದ್ಧನು ಅವರನ್ನು ಹಿಂದಕ್ಕೆ ಎಳೆದು ಮುಂದಕ್ಕೆ ನಡೆದನು.





ಆ ಗಲಾಟೆಯಲ್ಲಿ ಒಬ್ಬಳು ತಾಯಿಯ ಕಂಕುಳಲ್ಲಿದ್ದ ಮಗು ಕೆಳಗೆ ಜಾರಿ ಹೋಯಿತು. ಆನೆಯೂ ಅದರಬಳಿಗೆ ಬಂದುಬಿಟ್ಟಿತು. ಓಡುತ್ತಿದ್ದ ಜನರು ನೀಲಗಿರಿಯ ಕಾಲಕೆಳಗೆ ಮಗು ಜಜ್ಜಿ ಹೋಗುವುದೆಂದು ಕೂಗಿದರು.

ಬುದ್ಧನು ವೇಗವಾಗಿ ನಡೆದು ಮಗುವಿನ ಮುಂದೆ ನಿಂತನು. ಅದೇ ಕ್ಷಣದಲ್ಲಿ ಆನೆಯೂ ಅಲ್ಲಿಗೆ ಬಂದಿತು. ದುಷ್ಟ ಸ್ವಭಾವದ ಆ ಆನೆ ಬುದ್ಧನಿಗೂ ಮಗುವಿಗೂ ಕೂಡ ಕೇಡು ಮಾಡುವುದೆಂದು ಎಲ್ಲರೂ ಅಂದುಕೊಡಿರಲು, ವಿಚಿತ್ರವೆನಿಸುವಂತೆ ಆನೆ ಸುಮ್ಮನೆ ನಿಂತಿತು !





ಬುದ್ಧನು ಆನೆಯೊಂದಿಗೆ, "ನೀಲಗಿರೀ ! ಶಾಂತನಾಗು ! ಸೌಮ್ಯನಾಗು ! ಒಳೆಯವನಾಗು !" ಎಂದನು. ಆನೆ ಮೆಲ್ಲನೆ ಬುದ್ಧನ ಮುಂದೆ ಮೊಣಕಾಲೂರಿ ಆಶೀರ್ವಾದ ಬಯಸುವಂತೆ ತೋರಿತು. ಬುದ್ಧನು ಅದರ ಶರೀರವನ್ನು ಪೂಸಿದನು. ಇಂತಹ ಅನುಭವವನ್ನು ಅರಿಯದ ಪ್ರಜೆಗಳಿಗೆ, ಬುದ್ಧನು ಮಹಾಪುರುಷನೇ ನಿಜವೆಂದು ತಿಳಿಯಿತು.

# ಬೆಲೆಬಾಳುವ ಮೋಸಗಾರ

ಸುಬ್ಬಣ್ಣಯ್ಯ ದೊಡ್ಡ ಲಕ್ಷಾಧಿಕಾರಿಯಾದರೂ ಜಿಪುಣನಾಗಿದ್ದ. ಮುಖ್ಯವಾಗಿ ಕೂಲಿನಾಲಿಗಳಿಂದ ಬದುಕುವವರಿಗೆ ನ್ಯಾಯವಾಗಿ ಕೊಡ ಬೇಕಾದುದನ್ನು ಕೊಡಬೇಕಾದರೆ ಸುಬ್ಬಣ್ಣಯ್ಯನಿಗೆ ಪ್ರಾಣಕ್ಕೆ ಬರುತ್ತಿತ್ತು.

ಒಂದುದಿನ ನಾರಯ್ಯನೆಂಬ ಆಳು ದಿನವಿಡೀ ಸುಬ್ಬಣ್ಣಯ್ಯನ ಮನೆಯಲ್ಲಿ ಕೆಲಸಮಾಡಿ ಹೊರಟು ಹೋಗುವಾಗ ಕೂಲಿಕೊಡುವಂತೆ ಕೇಳಿದ. ಸುಬ್ಬಣ್ಣಯ್ಯನ ಹತ್ತಿರ ಐದು ರೂಪಾಯಿ ನೋಟು ಇದ್ದಿತೇ ಹೊರತು ಚಿಲ್ಲರೆ ಇರಲಿಲ್ಲ. ನಾರಯ್ಯನ ಹತ್ತಿರ ಒಂದು ರೂಪಾಯಿ ಇದ್ದರೆ, ಅದನ್ನು ಕೊಟ್ಟು ಐದು ರೂಪಾಯಿ ತೆಗೆದು ಕೊಳ್ಳುವಂತೆ ಸುಬ್ಬಣ್ಣಯ್ಯ ಹೇಳಿದ.

ತನ್ನ ಹತ್ತಿರ ಚಿಕ್ಕಾಸುಕೂಡಾ ಇಲ್ಲವೆಂದ ನಾರಯ್ಯ. ಹಾಗಾದರೆ ನಾಳೆ ಬರುವಂತೆ ಹೇಳಿದ ಸುಬ್ಬಣ್ಣಯ್ಯ. ಕೂಲಿ ಒಯ್ಯದಿದ್ದರೆ ಆ ರಾತ್ರಿ ಒಲೆಯಿಂದ ಬೆಕ್ಕು ಏಳಲಾರದೆಂದೂ, ತನಗೆ ಎಲ್ಲರೂ ಒಂದು ದಿನದ ಕೂಲಿ ಐದು ರೂಪಾಯಿ ಕೊಡವರೆಂದೂ ಹೇಳಿದ ನಾರಯ್ಯ. ತಾನು ನಾಲ್ಕು ರೂಪಾಯಿಗಿಂತ ಹೆಚ್ಚಿಗೆ ಕೊಡಲಾರೆ ಎಂದನು ಸುಬ್ಬಣ್ಣಯ್ಯ.

ಅಷ್ಟರಲ್ಲಿ ಕೋಟೀಶ್ವರ ಗೋಪಾಲಯ್ಯನ ಮಗ ವೀರೇಂದ್ರ ಅಲ್ಲಿಗೆ ಬಂದ. ಸುಬ್ಬಣ್ಣಯ್ಯ ಅವನ ಹತ್ತಿರ ಐದು ರೂಪಾಯಿಗೆ ಚಿಲ್ಲರೆ ಕೇಳಿದ. ನಾಲ್ಕೇ ರೂಪಾಯಿ ಇದೆಯೆಂದೂ, ಇನ್ನೊಂದು ರೂಪಾಯಿ ನಾಳೆ ಕೊಡವೆನೆಂದೂ ಹೇಳಿ ವೀರೇಂದ್ರನು ನಾಲ್ಕು ರೂಪಾಯಿ ತೆಗೆದು ಸುಬ್ಬಣ್ಣಯ್ಯನಿಗೆ ಕೊಟ್ಟ. ಸುಬ್ಬಣ್ಣಯ್ಯ ಆ ನಾಲ್ಕುರೂಪಾಯಿ ನಾರಯ್ಯನಿಗೆ ಕೊಟ್ಟು ಕಳುಹಿಸಿದನು.

ಆದರೆ ಐದು ರೂಪಾಯಿ ನೋಟನ್ನು ಒಯ್ದ ವೀರೇಂದ್ರನು ಒಂದು ರೂಪಾಯಿ ತಂದು ಸುಬ್ಬಣ್ಣಯ್ಯನಿಗೆ ಕೊಡಲೇ ಇಲ್ಲ. ಅದನ್ನು ಹೇಗೆ ವಸೂಲು ಮಾಡ ಬೇಕೆಂದು ಸುಬ್ಬಣ್ಣಯ್ಯನಿಗೆ ತೋರಲಿಲ್ಲ. ವೀರೇಂದ್ರನ ತಂದೆ ಕೋಟೀಶ್ವರನಲ್ಲವೆ? ಹೇಗೆ ಕೇಳುವುದು ಕೇವಲ ಒಂದು ರೂಪಾಯಿ?

"ಆ ರೂಪಾಯಿಯನ್ನು ನಾರಯ್ಯನಿಗೇ ಕೊಡ ಬಹುದಿತ್ತು!" ಎಂದು ಸುಬ್ಬಣ್ಣಯ್ಯ ಆಗಾಗ ಪಶ್ಚಾತ್ತಾಪ ಪಡುತ್ತಿದ್ದನು.





# ನೆರೆಕರೆಗಳು

**ಒಂ**ದು ಊರಿನಲ್ಲಿ ಶಂಕರ ಮತ್ತು ಕೇಶವ ಎಂಬವರು ಒಟ್ಟೊಟ್ಟಾಗಿಯೇ ವಿದ್ಯಾಭ್ಯಾಸ ಮಾಡಿದರು. ಇಬ್ಬರಿಗೂ ನಗರದಲ್ಲಿ ಉದ್ಯೋಗವೂ ಸಿಕ್ಕಿತು. ಅಲ್ಲಿ ಇಬ್ಬರೂ ಬೇರೆಬೇರೆ ಮನೆಗಳನ್ನು ಬಾಡಿಗೆಗೆ ಮಾಡಿಕೊಂಡು ಹೆಂಡತಿಯೊಂದಿಗೆ ಸಂಸಾರ ಹೂಡಿದರು. ಇಬ್ಬರ ಮನೆಗಳೂ ನಗರದ ಬೇರೆಬೇರೆ ಭಾಗಗಳಲ್ಲಿದ್ದುವು.

ಶಂಕರ ಕೇಶವರು ಸ್ನೇಹದಲ್ಲಿ ಒಂದಾಗಿದ್ದರೂ ಸ್ವಭಾವದಲ್ಲಿ ಇಬ್ಬರೊಳಗೆ ವ್ಯತ್ಯಾಸವಿದ್ದಿತು. ಶಂಕರನು ಮೂಗಿಗೆ ನೇರಾಗಿಯೇ ಹೋಗುವವನು. ಆದುದರಿಂದ ಅವನು ಇತರರೊಂದಿಗೆ ಬೆರೆತು ಕೊಳ್ಳುವವನಲ್ಲ. ಕೇಶವನು ಹಾಗಲ್ಲ. ಹತ್ತು ಜನರೊಡನೆ ಹೇಗಿರಬೇಕೆಂದು ತಿಳಿದವನು.

ಶಂಕರನು ಮನೆ ಮಾಡಿಕೊಂಡ ಪ್ರಾಂತದಲ್ಲಿ ವಾಸಮಾಡುವವರೆಲ್ಲ ತಾವೆಲ್ಲಾ ದೊಡ್ಡತನದಲ್ಲಿ ಬದುಕುವವರೆಂದು ತಿಳಿದಿರುವ ಜಂಬಗಾರರೆಂದೇ ಹೇಳಬಹುದು. ಅವರು ಯಾವಾಗಲೂ ತಮ್ಮ ದೊಡ್ಡತನವನ್ನೂ, ಇನ್ನೊಬ್ಬರ ಅಲ್ಪತನವನ್ನೂ ಕುರಿತು ಶಂಕರನ ಹತ್ತಿರ ಮಾತಾಡುವರು. ಶಂಕರನಿಗೆ ಅವರ ಮಾತುಗಳು ಹಿಡಿಸದಿದ್ದರೂ ದಾಕ್ಷಿಣ್ಯಕ್ಕಾಗಿ ಕೇಳಿ ಹೂಂ, ಹಾಂ, ಎಂದೇನಾದರೂ ಹೇಳಲೇಬೇಕಾಗುತ್ತಿತ್ತು. ಅದರಂತೆಯೇ ಇತರ ಮನೆಗಳ ಹೆಂಗುಸರು ಕೂಡಾ. ಅವರ ವಾಚಾಳಿತನದ ಹರಟೆ ಶಂಕರನ ಹೆಂಡತಿಗೂ ಹಿಡಿಸುತ್ತಿದ್ದಿಲ್ಲ. ಹೀಗೆ ಶಂಕರನೂ ಅವನ ಹೆಂಡತಿಯೂ, ತಮ್ಮನ್ನು ಮೆಚ್ಚದಿರುವುದನ್ನು ನೋಡಿ ಇತರರಿಗೆ ಅವರ ಗುಣ ಹಿಡಿಸಲಿಲ್ಲ. ಆಗಾಗ ಶಂಕರನ ಮನೆಗೂ ಇತರ ನೆರೆಕರೆಯವರಿಗೂ ಸಣ್ಣ ಸಣ್ಣ ಜಗಳದ ಚಕಮುಕಿಗಳೂ ಏಳುತ್ತಿದ್ದುವು. ಅಲ್ಲಿ ಶಾಂತಿಯಿಂದಿರಲಾಗದೆ, ಒಳ್ಳೆಯ ಮನೆಯನ್ನು ಬಿಡಲಿಕ್ಕೂ ಮನಸ್ಸು ಬಾರದೆ ಶಂಕರನು ಮಿಡುಕುತ್ತಿದ್ದನು.

ಅವನ ಮಿತ್ರ ಕೇಶವನಿರುವ ಮನೆಯಲ್ಲಿ ಸೌಕರ್ಯಗಳು ಕಡಿಮೆಯಾದರೂ ಅವನು ಅದೇ ಮನೆಯಲ್ಲಿ ಸುಖವಾಗಿರುವಂತೆ ಕಾಣುತ್ತಿದ್ದನು. ನಗರದಲ್ಲಿ ಮನೆ ಸಿಗುವುದಾದರೂ ಬಹಳ ಕಷ್ಟವೇ.

ಒಂದು ದಿನ ಶಂಕರನು ಕೇಶವನೊಂದಿಗೆ ತನ್ನ ನೆರೆಕರೆಯವರೊಡನೆ ಬಾಳಲಾಗದ ಕಷ್ಟಗಳನ್ನು ಕುರಿತು ಹೇಳಿಕೊಂಡನು. ಅದರಲ್ಲಿ ಯಾವ

**ಬಿ. ಎ. ರಾವ್**

ವಿಶೇಷ ಕಷ್ಟಗಳೂ ಇಲ್ಲದಂತೆ ಕೇಶವನು ನಗುತ್ತ, "ಅಷ್ಟೇನಾ ? ಒಂದು ನೋಡಿದರೆ ನಿನ್ನ ನೆರೆಕರೆಯವರು ನಿನ್ನೊಂದಿಗೆ ಚೆನ್ನಾಗಿಯೇ ಪ್ರವರ್ತಿಸುತ್ತಾರೆನ್ನಬಹುದು. ಅವರೊಂದಿಗೆ ಉತ್ಸಾಹದಿಂದಿರುವುದು ಬಹಳ ಸುಲಭ. ಬೇಕಾದರೆ ಕೆಲವು ದಿನ ನಾವಿಬ್ಬರೂ ನಮ್ಮ ನಮ್ಮ ಮನೆಗಳನ್ನು ಬದಲಾಯಿಸಿಕೊಳ್ಳೋಣ, ಆಗ ನನ್ನ ನೆರೆಕರೆಯವರ ಸಂಗತಿ ನಿನಗೂ ತಿಳಿಯುತ್ತೆ" ಎಂದನು.

ಕೇಶವನ ನೆರೆಕರೆಯವರು ಒಳ್ಳೆಯವರಾಗಿರಬೇಕು. ಆದುದರಿಂದಲೇ ಒಂದುಸಾರಿ ಕೂಡಾ ಅವರನ್ನು ಕುರಿತು ಕೇಶವನು ದೂರಿರಲಿಲ್ಲ. ಹೀಗೆ ನೆನೆದು ಶಂಕರನು ಸ್ನೇಹಿತನೊಂದಿಗೆ ವಾಸದ ಮನೆ ಮಾರ್ಪಡಿಸಿಕೊಳ್ಳಲು ಸಿದ್ಧನಾದನು. ಅದರಂತೆ ಕೇಶವನ ಮನೆಯಲ್ಲಿ ಶಂಕರನೂ ಶಂಕರನ ಮನೆಯಲ್ಲಿ ಕೇಶವನೂ ವಾಸವನ್ನು ಬದಲಾಯಿಕೊಂಡರು.

ಶಂಕರನು ಕೇಶವನ ಮನೆಗೆ ಬಂದು ಒಂದು ವಾರದಷ್ಟು ದಿನಗಳಾದುವೋ ಇಲ್ಲವೋ, ಅಷ್ಟರೊಳಗೇ, ತನ್ನ ಮೊದಲಿನ ಮನೆಯ ನೆರೆಕರೆ ಹೊರೆಗಳೇ ಎಷ್ಟೋ ವಾಸಿ ಎನಿಸತೊಡಗಿತು. ಆ ಪ್ರಾಂತದಲ್ಲಿರುವವರೆಲ್ಲರೂ ಸಾಕೂ ಸಾಲದಷ್ಟು ವರಮಾನವುಳ್ಳ ಕುಟುಂಬದವರಾಗಿದ್ದರು. ಸುತ್ತು ಮುತ್ತಲಿನ ಮನೆಯ ಮಕ್ಕಳು ಯಾವಾಗಲೂ ಶಂಕರನ ಮನೆಯನ್ನೇ ಅಂಟಿಕೊಂಡು ಓಡಾಡತೊಡಗಿದರು. ಶಂಕರನ ಮಕ್ಕಳ ಕೈಯಲ್ಲಿ ಏನಾದರೂ ತಿನ್ನುವ ವಸ್ತು ಇದ್ದರೆ ತೀರಿತು, ಅದನ್ನು ಆ ಮಕ್ಕಳು ಎಳೆದುಕೊಳ್ಳುತ್ತಿದ್ದರು. ಕೆಳಗೆ ಬಿದ್ದ ತುಣುಕುಗಳನ್ನು ತೆಗೆದು ಬಾಯಿಗೆ ಹಾಕಿ ಕೊಳ್ಳುವರು. ಆಚೆ ಈಚೆ ಮನೆಯ ಅಮ್ಮಂದಿರು ಅಕ್ಕಂದಿರು ಶಂಕರನ ಹೆಂಡತಿಯ ಬಳಿಗೆ ಬಂದು ಆಗಾಗ ಕೈಗಡ ಕೇಳುತ್ತಿದ್ದರು. ಒಂದು ಚಂಚ ಸಾಸಿವೆ, ಎರಡು ಬೆಂಕೀ ಕಡ್ಡಿ, ಒಂದು ಮುಷ್ಟಿ ಬೇಳೆ, ಹೀಗೆ ಅದೂ ಇದೂ, ಕೊಟ್ಟದ್ದು ಮತ್ತೆ ವಾಪಾಸು ಬರುವಂತಿಲ್ಲ. ತಿರುಗಿ ಕೇಳುವಂತಹ ಘನತೆಯ ವಸ್ತುಗಳೂ ಅಲ್ಲ. ಅದರಂತೆ ಶಂಕರನ ಹತ್ತಿರ



ಸುತ್ತು ಮುತ್ತಲಿನವರು ಕೇಳಿ ಒಯ್ಯುವ ಸಣ್ಣ ಪುಟ್ಟ ಸಾಲಗಳು ಕೂಡಾ ತಿರುಗಿಬಾರವು.

ಕಡೆಗೆ ಶಂಕರನೂ ಅವನ ಹೆಂಡತಿಯೂ ಆ ಬಗೆಯ ಕೈಗಡ ಕೊಡುವುದನ್ನು ನಿಲ್ಲಿಸಿದರು. ಆದರಿಂದ ನೆರೆಕರೆಯುವರೆಲ್ಲಾ ಒಂದು ಬಗೆಯ ಶತ್ರುಗಳಾದರು, "ಸಮಯಕ್ಕೆ ಒದಗದವರು ಇದ್ದರೇನು, ಸತ್ತರೇನು" ಎಂಬಂತಹ ಮಾತುಗಳು ಅವರ ಕಿವಿಗೇ ಬೀಳುವಂತೆ ಹೇಳುತ್ತಿದ್ದರು. ಈ ಭಾವನೆ ಮಕ್ಕಳ ಮಧ್ಯದಲ್ಲಿ ಜಗಳವಾಗಿ ಮಾರ್ಪಟ್ಟಿತು. ಅದೇ ದೊಡ್ಡವರ ಜಗಳಕ್ಕೂ ಕಾರಣವಾಗಿ ಜೀವನವೇ ನರಕಪ್ರಾಯವಾಯಿತು.

ಅವನು ಕೇಶವನ ಬಳಿಗೆ ಹೋಗಿ ತನ್ನ ಹೊಸ ಕಷ್ಟಗಳನ್ನೆಲ್ಲ ಮೊರೆಯಿಟ್ಟುಕೊಂಡನು. ಅದೇ ಸಮಯಕ್ಕೆ ಆ ತನ್ನ ಮೊದಲಿನ ಮನೆಯಲ್ಲಿ ತನ್ನೊಂದಿಗೆ ಮುಖಗಂಟು ಹಾಕಿಕೊಂಡಿದ್ದ ನೆರೆ ಮನೆಯವರು, ಕೇಶವನೊಂದಿಗೆ ಸುಮುಖತೆಯಲ್ಲಿ ಮಾತಾಡುವುದನ್ನು ನೋಡಿ, ಶಂಕರನಿಗೆ ಆಶ್ಚರ್ಯ ವಾಯಿತು. ಎಲ್ಲರೂ ಹೋದ ಮೇಲೆ ಕೇಶವನು ಶಂಕರನೊಂದಿಗೆ ಹೀಗೆಂದನು :

"ಶಂಕರಾ, ನಿನಗೆ ಲೋಕ ವ್ಯವಹಾರ ತಿಳಿಯದು. ನೆರೆಕರೆಯವರೊಡನೆ ಒಳಿತಾಗಿರುವುದೊಂದು ಕಲೆ. ಅದೇನೂ ಕಷ್ಟವಿಲ್ಲ. ನೀನು ಇಲ್ಲಿಯ ಜನರೊಂದಿಗೆ ಕಲೆಯಲಾಗದೆ ನನ್ನ ಮನೆಗೆ ಹೋದೆ. ನಾನು ಇವರನ್ನೆಲ್ಲಾ ಹೇಗೆ ಆಕರ್ಷಿಸಿದ್ದೇನೆ ನೋಡಿದಿಯಷ್ಟೆ? ಜಂಬಗಾರರಾದ ಇವರೆಲ್ಲ ತಾವು ಹೇಳುವುದೇ ನಿಜವೆಂದುಕೊಳ್ಳುತ್ತಾರೆ. ನಾನೂ ಅವರನ್ನು ಹೊಗಳಿಬಿಡುತ್ತೇನೆ. ಅದಕ್ಕೇ ಅವರಿಗೆ ನನ್ನ ಮೇಲೆ ಒಂದು ಗುರಿ. ಹೀಗೆ ಒಮ್ಮೆ ಅವರ ಗುರಿ ಕುದುರಿಸಿ ಕೊಂಡರೆ ಅವರು ಒಳ್ಳೆಯವರಂತೆ ವರ್ತಿಸುತ್ತಾರೆ. ಅವರ ಜಂಬದ ಮಾತುಗಳಿಂದ ನಮಗಾಗುವ ನಷ್ಟವೇ ನಿಲ್ಲವಷ್ಟೆ? ತಮ್ಮ ದೊಡ್ಡಸ್ತಿಕೆ ತೋರಿಸಲು ನನ್ನ ಮಕ್ಕಳಿಗೆ ಬಹುಮಾನ ಕೊಡುತ್ತಾರೆ. ನನಗೂ ಸಹಾಯ ಮಾಡುತ್ತಾರೆ. ನನ್ನ ಹೆಂಡತಿ ಕೂಡಾ ಸುತ್ತಲಿನ ಹೆಂಗುಸರ ಮುಖಕ್ಕೆ ತಕ್ಕ ಹಾಗೆ ಮಾತಾಡಿ ಸುಮುಖತೆಗೊಳಿಸಿಕೊಂಡಿದ್ದಾಳೆ. ಈಗ ನೀನಿರುವ ನನ್ನ ಮನೆಯ ನೆರೆಕರೆಯವರು ಕೈಗಡ ಕೇಳಲು ಬರುವುದನ್ನು ಪ್ರಾರಂಭದಲ್ಲೇ ಇಲ್ಲವೆನ್ನ ಬೇಕಿತ್ತು. ಮೊದಲು ಕೊಟ್ಟು ಆಮೇಲೆ ಬಿಟ್ಟದ್ದೇ ಶತ್ರುತ್ವಕ್ಕೆ ಕಾರಣವಾಯಿತು. ಪರರ ಮಕ್ಕಳ ತಾಯಂದಿರ ಕೈಗೆ 'ಮಕ್ಕಳಿಗೆ ಕೊಡೀ' ಅಂತ ಏನಾದರೂ ಸ್ವಲ್ಪ ಕೊಟ್ಟು ಬಿಟ್ಟರೆ, ಆ ಮಕ್ಕಳೂ ಬಾರರು. ತಾಯಂದಿರೂ ದಾಕ್ಷಿಣ್ಯಪಡುವರು. ಮಕ್ಕಳನ್ನು ಹತೋಟಿಯಲ್ಲಿಟ್ಟುಕೊಳ್ಳುವರು. ಶಾಂತಿಯ ದಾರಿ ಇಂತಹ ಸೂಕ್ಷ್ಮಗಳಲ್ಲೇ ಇದೆ!"



# ಯಾವುದು ಮೊದಲು?

**ಒಂ**ದು ದೇಶದ ಒಬ್ಬ ರಾಜನಿಗೆ ಒಂದೇ ಸಾರಿ ಎರಡು ಸಮಸ್ಯೆಗಳುಂಟಾದುವು. ಹಳೇ ಕಾಲದ ಕೋಟೆಯ ಗೋಡೆ ಶಿಥಿಲವಾಗಿ ಹೋಗಿತ್ತು. ಅದನ್ನು ಮತ್ತೆ ಬಲಪಡಿಸಿ ಕಟ್ಟಿಸಬೇಕು. ದೇಶದಲ್ಲಿ ಕಳ್ಳರ ಕಾಟ ಹೆಚ್ಚಾಗಿದೆ. ಅದನ್ನು ತಡೆಯಬೇಕು. ಮೊದಲು ಯಾವುದನ್ನು ಮಾಡಿಸಬೇಕೆಂದು ಆಲೋಚಿಸುತ್ತ ಆ ರಾಜನು ವೇಷ ಬದಲಾಯಿಸಿಕೊಂಡು ತಿರುಗುತ್ತ, ಸಂಜೆಯ ಹೊತ್ತಿನಲ್ಲಿ ಒಂದು ಹೊಲದ ಬಳಿಗೆ ಬಂದನು.

ಆ ಹೊಲದಲ್ಲಿ ಬೆಳೆಯೂ ಕಳೆಯೂ ಒಂದೇ ರೀತಿಯಲ್ಲಿ ಬೆಳೆದಿದ್ದುವು. ರೈತನು ಅದನ್ನು ಗಮನಿಸದೆ ಹೊಲದ ಬೇಲಿಯನ್ನು ಸರಿ ಮಾಡಿಕೊಂಡಿದ್ದನು.

"ಇನ್ನೂ ಕಳೆಗಳನ್ನು ಕೀಳದೆ ಬೇಲಿ ಹಾಕುವುದರಲ್ಲೇ ಮಗ್ನನಾಗಿರುವೆಯಲ್ಲಾ?" ಎಂದನು ರಾಜ ಆ ರೈತನನ್ನು ನೋಡಿ.

ರೈತನು ರಾಜನನ್ನು ಸ್ವಲ್ಪ ಹೊತ್ತು ಒಂದು ತರಾ ನೋಡಿ, "ಕಳೇ ಅಂದರೆ ಅಡಿಗೇ ಮನೇಲಿರುವ ಮೊಲ. ಅದೆಲ್ಲಿಗೆ ಹೋಗುತ್ತದೆ? ಬೇಲಿ ಸರಿ ಮಾಡದೆ ಹೋದರೆ ಅಸಲಿಗೇ ಮೋಸವಲ್ಲವೇನು?" ಎಂದು ಹೇಳಿ ಸಣ್ಣಗಾಗಿ ನಕ್ಕನು.

ರಾಜನ ಸಮಸ್ಯೆ ಆ ಮಾತಿನಿಂದ ತೀರಿತು. ಮರುದಿನ ಕೋಟೆಯ ಗೋಡೆಯನ್ನು ಬಲಪಡಿಸುವ ಕೆಲಸ ಪ್ರಾರಂಭ ಮಾಡಿಸಿದನು.





# ರಾಜ್ಯಾನ್ವೇಷಣೆ

ಒಂದಾನೊಂದು ಕಾಲದಲ್ಲಿ ಮಾಳವದೇಶದಲ್ಲಿ ಸುದರ್ಶನನೆಂಬ ಯುವಕನಿದ್ದನು. ಅವನು ನೋಡಲು ನವಮನ್ಮಥನ ಹಾಗೆ ಸುಂದರನಾಗಿದ್ದರೂ ತುಂಬಾ ಬಡವನು. ವಿದ್ಯೆಯ ಮೇಲೆ ಮನಸ್ಸುಳ್ಳವನಾದುದರಿಂದ, ಕಾಶೀ ನಗರಕ್ಕೆ ಹೋಗಿ, ಅವರಿವರ ಕಾಲು ಹಿಡಿದು ಗುರುವಿನ ದಯೆ ಸಂಪಾದಿಸಿ, ಚೆನ್ನಾಗಿ ಓದಿಕೊಂಡು ಸ್ವದೇಶಕ್ಕೆ ಹೊರಟನು. ಬಹುದೂರದ ಪ್ರಯಾಣ.

ದಾರಿಯಲ್ಲಿ ಅಲ್ಲಲ್ಲಿ ಮಜಿಲೀ ಹಾಕುತ್ತ ಒಂದು ದಿನ ರಾತ್ರಿ ಸುದರ್ಶನನು ಪುರಂದರವೆಂಬ ಚಿಕ್ಕದೊಂದು ರಾಜ್ಯವನ್ನು ಪ್ರವೇಶಿಸಿದನು. ನಗರಕ್ಕೆ ಕಾಲಿಡುವಷ್ಟರಲ್ಲಿ ಚೆನ್ನಾಗಿ ಕತ್ತಲಾಯಿತು. ಆ ಕತ್ತಲೆಯಲ್ಲಿ ಅಲ್ಲಿ ಇಲ್ಲಿ ಅಲೆದಾಡುವುದಕ್ಕೆ ಬದಲಾಗಿ ನೇರಾಗಿ ರಾಜನ ಅರಮನೆಗೇ ಹೋಗಿ ರಾಜನನ್ನೇ ನೋಡಿ, "ಮಹಾರಾಜರೆ, ನಾನೊಬ್ಬ ಪರದೇಶಿ. ಅಭ್ಯಾಗತನಾಗಿ ಬಂದೆನು. ಈ ಒಂದು ರಾತ್ರಿಗೆ ಊಟವನ್ನೂ ಮಲಗುವ ಸ್ಥಳವನ್ನೂ ಕೊಡಿಸಿದರೆ ಸಾಕು. ಬೆಳಗಾದಕೂಡಲೇ ನನ್ನ ದಾರಿ ಹಿಡಿದು ಹೋಗುತ್ತೇನೆ. ಪ್ರಭುಗಳು ದಯಮಾಡಬೇಕು." ಎಂದು ಪ್ರಾರ್ಥಿಸಿಕೊಂಡನು. ಆಗ ರಾಣಿಯೂ ರಾಜನೊಂದಿಗೇ ಇದ್ದಳು.

ಪುರಂದರದ ರಾಜನು ಅವನ ಅಂದಚೆಂದಗಳಿಗೂ, ಧೈರ್ಯದ ಮಾತುಗಳಿಗೂ, ಮಾತಿನಲ್ಲಿ ಬೆರತ ಮಾಧುರ್ಯಕ್ಕೂ ಮುಗ್ಧನಾಗಿ ಮೆಚ್ಚಿ ಹಾಗೇ ಆಗಲೆಂದನು. ಸುದರ್ಶನನು ಸ್ನಾನಕ್ಕೆ ಹೋದ ಮೇಲೆ, ರಾಣಿ ತನ್ನ ಗಂಡನನ್ನು ನೋಡಿ, "ನೋಡಿದಿರಾ ಆ ಹುಡಗನನ್ನು ! ಸಾಧಾರಣ ಬಟ್ಟೆಬರೆ ತೊಟ್ಟುಕೊಂಡಿದ್ದಾನಾದರೂ ನಿಜ ಸಂಗತಿ ಮುಚ್ಚಿ ಹೋಗಲಿಲ್ಲ. ಅವನು ವೇಷ ಬದಲಾಯಿಸಿಕೊಂಡು ತಿರುಗುವ ಯಾವ ಮಹಾರಾಜನ ಕುಮಾರನೇ ನಿಜ. ಅವನ ವಿಷಯ ಸ್ವಲ್ಪ ವಿಚಾರಿಸಿ ನೋಡಿ. ಅನುಕೂಲವಾದರೆ ನಮ್ಮ ಮಗಳನ್ನು ಕೊಟ್ಟು ಮದುವೆ ಮಾಡೋಣ. ಎಲ್ಲದರಲ್ಲಿಯೂ ಕುಮಾರಿಗೆ ಸರಿಯಾದ ವರನೆಂದೇ ನನಗೆ ಕಾಣುತ್ತದೆ." ಎಂದಳು.

"ಅದು ನಿಜವಾದರೂ ಯಾವ ಉದ್ದೇಶದಿಂದಲೋ ಮಾರುವೇಷದಲ್ಲಿ ತಿರುಗುವವನು ನಾವು ಕೇಳಿದ ಮಾತ್ರಕ್ಕೆ ನಿಜ ಹೇಳುವನೇ? ಮಂತ್ರಿ

ಯನ್ನು ಕೂಡಾ ಕೇಳಿ ಅವನ ಅಭಿಪ್ರಾಯವೇನೆಂದು ನೋಡೋಣ" ಎಂದನು ರಾಜ.

ಮಂತ್ರಿ ರಾಜನು ಹೇಳಿದ ಸಂಗತಿಯನ್ನು ಕೇಳಿ ಅರ್ಥ ಮಾಡಿಕೊಂಡು, "ಅದಕ್ಕೇನು ಕಷ್ಟ? ಆ ಹುಡುಗ ರಾಜಕುಮಾರ ಹೌದೋ ಅಲ್ಲವೋ ಎಂಬುದನ್ನು ಕಂಡು ಹಿಡಿಯುವುದು ಸುಲಭ. ಆ ವಿಷಯವನ್ನು ನನಗೆ ಬಿಟ್ಟುಬಿಡಿ. ಒಂದೇ ರಾತ್ರಿಯಲ್ಲಿ ಗೊತ್ತಾಗಲಿಕ್ಕಿಲ್ಲ. ಆದುದರಿಂದ ಅವನನ್ನು ಏನೋ ಒಂದು ಕಾರಣ ಹೇಳಿ, ಎರಡು ದಿನಗಳಾದರೂ ಇಲ್ಲಿಯೇ ನಿಲ್ಲಿಸಿಕೊಳ್ಳಬೇಕು" ಎಂದನು.

ಸುದರ್ಶನನು ಊಟ ಮಾಡುತ್ತಿದ್ದಾಗ ರಾಜನು ಅವನೊಂದಿಗೆ, "ಏನಪ್ಪಾ ಹುಡುಗಾ, ನೀನು ನಾಳೆ ಬೆಳಿಗ್ಗೆಯೇ ಹೋಗುವೆನೆಂದು ಹೇಳಿದೆಯಲ್ಲವೆ? ಹಾಗೆ ಹೋಗಲು ಸಾಧ್ಯವಿಲ್ಲ. ಏಕೆಂದರೆ ನಾಳೆ ನನ್ನ ಕುಮಾರಿ ಇಂದುಮತಿಯ ಹುಟ್ಟು ಹಬ್ಬದ ದಿನ. ನಾಳೆ ಕೂಡಾ ನೀನು ಇಲ್ಲಿಯೇ ಇದ್ದುಬಿಡು. ಇರಲೇಬೇಕು. ಅವಸರವಾಗಿ ಹೊರಡ ಬೇಕಾದರೆ ನಾಡದು ಹೊರಟು ಹೋಗಬಹುದು. ಒಲ್ಲೆ ನೆನ್ನ ಬೇಡ" ಎಂದನು.

ಇಷ್ಟರೊಳಗೆ ಮಂತ್ರಿ ಸುದರ್ಶನನಿಗಾಗಿ ಒಂದು ಕೋಣೆಯಲ್ಲಿ ಸಾಧಾರಣದ ಹಾಸಿಗೆಯೊಂದನ್ನು ಹಾಸಿಸಿ, ಒಬ್ಬ ಕಾವಲುಗಾರನನ್ನು ನಿಲ್ಲಿಸಿ, "ನೀನು ಬೆಳಗಿನವರೆಗೂ ಈ ಬಾಗಿಲಲ್ಲಿಯೇ ಕಾವಲಿದ್ದು, ಒಳಗಿನ ಅತಿಥಿ ಸುಖವಾಗಿ ನಿದ್ದೆ ಮಾಡಿದನೋ ಇಲ್ಲವೋ ಎಂಬುದನ್ನು ಅವನಿಗೆ ಗೊತ್ತಾಗದ ಹಾಗೆ ಗಮನಿಸುತ್ತಿರು" ಎಂದು ಎಚ್ಚರಿಸಿದನು.

ಸುದರ್ಶನನು ಊಟ ಮಾಡಿದ ಮೇಲೆ ತನಗಾಗಿ ಏರ್ಪಾಡಿಸಲಾದ ಮಲಗುವ ಕೋಣೆಗೆ ಬಂದನು. ಬಾಗಿಲು ಮುಚ್ಚಿ ತಾಳ ಹಾಕಿಕೊಂಡು ತನ್ನ ಹಾಸಿಗೆಯ ಮೇಲೆ ಕಳಿತು, ಅಂಗಿಯನ್ನು ತೆಗೆದನು. ಆಗ ಅಂಗಿಯ ಜೇಬಿನಲ್ಲಿದ್ದ ಎರಡು ಮೂರು



ಮುಷ್ಟಿ ಹಸಿಗಡಲೆ ಹಾಸಿಗೆ ಪೂರಾಚೆಲ್ಲಿ ಕೋಣೆಯೊಳಗೆಲ್ಲಾ ಹರಡಿತು.

ನಡೆದ ಸಂಗತಿ ಏನಂದರೆ, ಸುದರ್ಶನನು ಬರುವಾಗ ದಾರಿಯ ಬದಿಯಲ್ಲಿ ಕಡಲೆಯ ಹೊಲಗಳು ಹತ್ತಿಕೊಂಡವು, ಅವನು ಬಡವನೂ, ಮುಂದಾಲೋಚನೆಯುಳ್ಳವನೂ ಆದುದರಿಂದ, ರಾತ್ರಿಯಲ್ಲಿ ಊಟ ಸಿಕ್ಕದೇ ಹೋದರೆ ಇದನ್ನು ತಿನ್ನಬಹುದೆಂದುಕೊಂಡು, ಕಡಲೇ ಕಾಯಿ ಕದಿರುಗಳನ್ನು ಕೊಯಿದುಕೊಂಡು, ಸುಲಿದು ಹಸಿಕಡಲೆಗಳನ್ನು ಎರಡು ಜೇಬುಗಳಲ್ಲಿಯೂ ತುಂಬಿಕೊಂಡಿದ್ದನು. ಆ ಸಂಗತಿ ಅವನಿಗೆ ರಾಜನ ಮನೆಯಲ್ಲಿ, ಜೇಬು ಭಾರವಿರುವುದೂ ಗೊತ್ತಾಗದಂತೆ ಪೂರ್ತಿ ಮರೆತಿತ್ತು.

ಈ ಹಾಳಾದ ಹಸಿಗಡಲೆ ಕೋಣೆ ಪೂರಾ ಚೆಲ್ಲಿದುದರಿಂದ ಅವನಿಗೆ ದೊಡ್ಡ ಉಪದ್ರವಾಯಿತು. ತಾನೊಬ್ಬ ಸಾಮಾನ್ಯದವನಾಗಿದ್ದರೂ ಮಹಾರಾಜರು ದೊಡ್ಡ ರೀತಿಯಲ್ಲಿ ಉಪಚರಿಸಿ ಆತಿಥ್ಯವಿತ್ತಿದ್ದಾರೆ.



ಇಲ್ಲಿಯ ನೌಕರರು ನಾಳೆ ಬೆಳಿಗ್ಗೆ ಈ ಕಡಲೆಗಳನ್ನು ನೋಡಿ, ಮಹಾರಾಜರೊಂದಿಗೆ ಹೇಳಬಿಟ್ಟರೆ ಅವರಿಗೆ ತನ್ನ ಮೇಲಿದ್ದ ಆದರಣೆ ಪೂರಾ ಹೋಗಿ ಬಿಡುತ್ತದೆ. ತನ್ನನ್ನು ಕೂಡಲೇ ಓಡಿಸಿದರೂ ಓಡಿಸಿಯಾರು! ಈ ಯೋಚನೆಯಿಂದ ಸುದರ್ಶನನು ತನ್ನ ನಿದ್ದೆಯನ್ನು ದೂರ ಓಡಿಸಿ, ಹಾಸಿಗೆಯ ಮೇಲೆ ಬಿದ್ದ ಕಡಲೆ ಕಾಳುಗಳನ್ನು ಜಾಗರೂಕತೆಯಿಂದ ಹೆಕ್ಕ ತೊಡಗಿದನು. ಎಡೆಗಳಲ್ಲಿ ಏನೂ ಸಿಕ್ಕಿರದಂತೆ ಹಾಸಿಗೆಯ ಮೇಲಿನ ದಪ್ಪಟಗಳನ್ನು ಎತ್ತಿ ಕೊಡವಿದನು.

ಆ ಮೇಲೆ ಕೋಣೆಯೊಳಗೆಲ್ಲಾ ಚೆಲ್ಲಿದ ಕಾಳುಗಳನ್ನು ಒಂದೊಂದಾಗಿ ಹೆಕ್ಕಿದನು. ಮೂಲೆ ಮುಡುಕುಗಳನ್ನು ಕೂಡಾ ಬಿಡದೆ ಹುಡುಕಿ ಹೆಕ್ಕುತ್ತ ಅರ್ಧರಾತ್ರಿಯವರೆಗೂ ಅದೇ ಕೆಲಸ ಮಾಡಿದನು. ಎಲ್ಲಾ ಆದ ಮೇಲೆ ಆ ಕಡಲೇ ಕಾಳುಗಳನ್ನು ಇಟ್ಟು ಕೊಳ್ಳುವುದು ಒಳ್ಳೆಯದಲ್ಲವೆಂದು ತಿಳಿದು, ಹಸಿವಿಲ್ಲ ದಿದ್ದರೂ ಒಂದೊಂದಾಗಿ ತಿನ್ನುತ್ತ ಎಲ್ಲಾ ತೀರಿಸಿ ಬಿಟ್ಟನು, ಅಷ್ಟಾಗುವಾಗ ರಾತ್ರಿ ಮೂರು ಜಾಮ ಕಳೆಯಿತು. ಆ ಮೇಲೆ ಸಮಾಧಾನದ ನಿಟ್ಟುಸಿರು ಬಿಟ್ಟು ಮಲಗಿದನು. ಕೂಡಲೇ ನಿದ್ದೆಯೂ ಬಂದಿತು.

ಮರುದಿನ ಬೆಳಿಗ್ಗೆ ಮಂತ್ರಿ ಆ ಕೋಣೆಯ ಕಾವಲಿನವನನ್ನು ಕರೆದು, "ರಾತ್ರಿ ಒಳಗಿನ ಅತಿಥಿ ಹೇಗಿದ್ದ? ಚೆನ್ನಾಗಿ ನಿದ್ದೆ ಮಾಡಿದನೋ?" ಎಂದು ಕೇಳಿದನು.

"ಅದೇನು ಹೇಳಲಿ ಪ್ರಭೂ! ರಾತ್ರಿ ಪೂರಾ ಅವರಿಗೂ ನಿದ್ದೆ ಇಲ್ಲ, ನನಗೂ ನಿದ್ದೆ ಇಲ್ಲ. ಬೆಳತನಕ ಅವರು ಕೋಣೆಯೊಳಗೆ ತಿರುಗಾಡಿಕೊಂಡೇ ಹೊತ್ತು ಕಳೆದರು. ಏನಾಯಿತೋ ಪಾಪ! ಹಾಸಿಗೆಯ ದುಪ್ಪಟಿ ಕೊಡರಿಕೊಂಡಿದ್ದ ಶಬ್ದವೂ ಕೇಳಿತು. ಮೂರು ಜಾಮದ ಮೇಲೆ ಯಾವ ಶಬ್ದವೂ ಕೇಳಲಿಲ್ಲ. ನಿದ್ದೆ ಮಾಡಿದರೆಂದು ತಿಳಿದು. ನಾನೂ ಸ್ವಲ್ಪ ಮಲಗಿದೆ." ಎಂದನು ಕಾವಲಿನವ.

ಮಂತ್ರಿ ಕೂಡಲೇ ರಾಜನ ಬಳಿಗೆ ಹೋಗಿ, "ಮಹಾರಾಜಾ, ನಮ್ಮ ಅತಿಥಿ ಅತ್ಯಂತ ಸುಕುಮಾರನೇ ಸರಿ. ನಾನು ರಾತ್ರಿಯಲ್ಲಿ ಹಾಸಿದ ಹಾಸಿಗೆಯ ಮೇಲೆ ಸಾಧಾರಣದವನಾಗಿರುತ್ತಿದ್ದರೆ ಸುಖವಾಗಿ ನಿದ್ದೆ ಮಾಡುತ್ತಿದ್ದ. ಇವನು ಮಹಾ ಭೋಗಿಯೇ ನಿಜ! ಯಾವ ಚಕ್ರವರ್ತಿಯ ಕುಮಾರನೋ ಆಗಿರಬೇಕು. ಆ ವಿಷಯದಲ್ಲಿ ಇನ್ನೇನೂ ಸಂದೇಹವಿಲ್ಲ." ಎಂದನು.

ಬೆಳಗಿನವರೆಗೆ ಕಡಲೆ ತಿಂದು ಹೊಟ್ಟೆ ತುಂಬಿಸಿಕೊಂಡ ಸುದರ್ಶನನು, ಮರುದಿನ ಉಪಾಹಾರಗಳನ್ನು ಆಸಕ್ತಿಯಿಂದ ತಿನ್ನದೇ ಬಿಟ್ಟುದನ್ನು ನೋಡಿ, ರಾಜನಿಗೂ ರಾಣಿಗೂ ಮಂತ್ರಿಯ ಮಾತು ನಿಜವೆಂದು ದೃಢವಾಯಿತು. ಆ ದಿನ ರಾಜಕುಮಾರಿಯ ಹುಟ್ಟು ಹಬ್ಬದ ಔತಣವನ್ನೂ ಸುದರ್ಶನನು ಸರಿಯಾಗಿ ಸ್ವೀಕರಿಸಲಿಲ್ಲ. ಎರಡನೇ ರಾತ್ರಿಯಲ್ಲಿ ಮಂತ್ರಿ ಸುದರ್ಶನನಿಗೆ ಉತ್ತಮವಾದ ಹಂಸತೂಲಿಕಾ ತಲ್ಪ

ವನ್ನೇ ಏರ್ಪಡಿಸಿಕೊಟ್ಟನು. ಕಳೆದ ರಾತ್ರಿ ನಿದ್ದೆ ಬಿಟ್ಟ ಕಾರಣದಿಂದ ಬಹಳ ಬಳಲಿದ ಸುದರ್ಶನನು ಹಂಸ ತೂಲಿಕಾ ತಲ್ಪದ ಮೇಲೆ ಬಿದ್ದುಕೊಂಡದ್ದೇ ತಡ, ಗಾಢ ನಿದ್ರೆಯಲ್ಲಿ ಮುಳುಗಿ ಹೋದನು.

ಆಗ ಮಂತ್ರಿ ರಾಜದಂಪತಿಗಳನ್ನು ನೋಡಿ, "ಇನ್ನು ಯಾವ ಸಂದೇಹವೂ ಬೇಡ. ಇವನು ಮಹಾ ಘನಶಾಲೀ ಯುವಕನೇ. ಯಾವ ಕಾರಣದಿಂದಲೋ ವಿರಕ್ತನಾಗಿ ತಿರುಗುತ್ತಿದ್ದಾನೆ. ಅಂಥವನು ನಮ್ಮ ಕುಮಾರಿಯನ್ನು ಮದುವೆಯಾಗಲು ಒಪ್ಪುವನೋ ಎಂಬುದೇ ಅನುಮಾನ !" ಎಂದನು.

"ಹುಡುಗ ಚೆನ್ನಾಗಿದ್ದಾನೆ. ನಮ್ಮ ಕುಮಾರಿಯನ್ನು ನೋಡಿದರೆ ದುಡುಕಿನ ವಿರಕ್ತಿ ಕರಗದೇ ಇರದು. ಸಂಶಯವೇಕೆ ? ಒಂದು ಮಾತು ಅವನನ್ನೇ ಕೇಳಿ ನೋಡಿ" ಎಂದಳು ರಾಣಿ.

ರಾಣಿಯ ಅಭಿಪ್ರಾಯದಂತೆ ಮಂತ್ರಿ ಇಂದುಮತಿಯನ್ನು ಕರೆದುಕೊಂಡು ಸುದರ್ಶನನ ಬಳಿಗೆ ಹೋಗಿ, ಮದುವೆಯ ಪ್ರಸ್ತಾವನೆ ಮಾಡಿದನು. ಮೊದಮೊದಲು ಏನೂ ತೋರದವನಾಗಿದ್ದ ಸುದರ್ಶನನು, ರಾಜಕುಮಾರಿಯ ಸೌಂದರ್ಯದಲ್ಲಿ ಸಿಕ್ಕಿಕೊಂಡವನಾದನು. ಅವಳಿಗೆ ತನ್ನ ಮೇಲಿರುವ ಅನುರಾಗವನ್ನೂ ಕಂಡು ಹಿಡಿದು ಮದುವೆಯಾಗಲು ಒಪ್ಪಿಗೆ ಕೊಟ್ಟನು. ರಾಜನಿಗೂ ರಾಣಿಗೂ ಆದ ಸಂತೋಷಕ್ಕೆ ಪಾರವೇ ಇರಲಿಲ್ಲ. ಆಮೇಲೆ ಸಮೀಪದಲ್ಲೇ ಸಿಕ್ಕಿದ ಒಂದು ಶುಭಮುಹೂರ್ತದಲ್ಲಿ ಸುದರ್ಶನನಿಗೆ ರಾಜಕುಮಾರಿ ಇಂದುಮತಿಯೊಂದಿಗೆ ಶುಭಸಾಂಗವಾಗಿ ಮದುವೆಯಾಯಿತು.

ಅನಂತರ ಒಂದು ವರ್ಷದವರೆಗೂ ಅವನು ಅಲ್ಲೇ ಇದ್ದು ಸಮಸ್ತ ಸುಖಗಳನ್ನೂ ಅನುಭವಿಸಿದನು, ಅನಂತರವಷ್ಟೇ ಅವನಿಗೆ ಸಹಜವಾಗಿಯೇ ಕಷ್ಟಗಳು ಪ್ರಾರಂಭವಾದುವು.

ಒಂದು ದಿನ ಇಂದುಮತಿ ಗಂಡನೊಂದಿಗೆ, "ಎಷ್ಟು ಕಾಲ ನಾವು ಇಲ್ಲಿಯೇ ತಂಗಿರುವುದು ? ನಿಮ್ಮ ರಾಜ್ಯದೊಂದಿಗೆ ನಿಮಗಾದ ಮನಸ್ತಾಪ ಇನ್ನೂ ತಣಿದಿಲ್ಲವೇ ? ನಮ್ಮ ಮನೆಗೆ ನಾವು





ಹೋಗುವುದೇ ಒಳ್ಳೇದು. ಹೊರಡಿರಿ" ಎಂದಳು.

ಸುದರ್ಶನನು ಮೇಲೆ ನೋಡುತ್ತ, "ನಾನು, ನಮ್ಮ ರಾಜ್ಯ, ಮನಸ್ತಾಪ..." ಎಂದು ಗೊಣಗಿಕೊಂಡನು.

"ಹೌದು ನಮ್ಮ ರಾಜ್ಯವೇ ನಾನು ಹೇಳುವುದು. ಏನೋ ಕೋಪಮಾಡಿ ಹೊರಟು ಬಂದಿದ್ದೀರಿ. ನನಗೆಲ್ಲಾ ಗೊತ್ತು. ಎಷ್ಟು ಕಾಲ ಹೀಗೆ ನಾಟಕ ತೋರಿಸುವಿರಿ? ಅಪ್ಪ, ನಿಮ್ಮನ್ನು ಪರೀಕ್ಷೆ ಮಾಡದೆ ನನ್ನನ್ನು ಕೊಟ್ಟಿಲ್ಲ" ಎಂದು ಇಂದುಮತಿ ಮಂತ್ರಿ ಮಾಡಿದ ಪರೀಕ್ಷೆಯನ್ನು ಕೂಡಾ ವಿವರಿಸಿ ಹೇಳಿದಳು. ಅದನ್ನು ಕೇಳುತ್ತಿದ್ದಾಗ ಸುದರ್ಶನನಿಗೆ ತನ್ನಬುದ್ಧಿ ಹತವಾದಂತೆನಿಸಿತು.

ಈಗ ತನ್ನ ಮಡದಿಗೆ ಒಂದು ರಾಜ್ಯವನ್ನು ತೋರಿಸಲೇ ಬೇಕಾಗಿದೆ. ಅವಳೊಂದಿಗೆ ನಿಜ ಸಂಗತಿಯನ್ನು ಎಂದೋ ಹೇಳಿಬಿಡಬೇಕಿತ್ತು. ಈಗಲೂ ಹೇಳಬಹುದು. ಅದನ್ನು ಕೇಳಿ ಅವಳು ತುಂಬಾ ನೊಂದುಕೊಳ್ಳುವಳೆಂದು ಹೆದರಿದನು. ಅವಳನ್ನು ನೋಯಿಸಲು ಅವನಿಂದಾಗಲಿಲ್ಲ.

ಇವಳನ್ನು ಕರೆದುಕೊಂಡು ದೇಶಾಟನೆ ಮಾಡುತ್ತಾ ಇರುತ್ತೇನೆ. ಕಾಲಕ್ರಮದಲ್ಲಿ ಇವಳಿಗೆ ತನ್ನಂತೆ ನಿಜ ಸಂಗತಿ ಗೊತ್ತಾಗುತ್ತದೆ. ಇಲ್ಲಿ ಇರಲು ಇನ್ನು ಸಾಧ್ಯವಿಲ್ಲ. ಹೀಗೆಂದುಕೊಂಡು ಸುದರ್ಶನನು ಅತ್ತೆ ಮಾವಂದಿರೊಡನೆ ಹೇಳಿ, ಅವರು ಕೊಟ್ಟ ಕಾಣಿಕೆಗಳಲ್ಲಿ ಲಘುವಾದುವನ್ನಷ್ಟೇ ಎತ್ತಿಕೊಂಡು, ಮನೆಗೆ ಹೋದ ಮೇಲೆ ಎಲ್ಲರನ್ನೂ ಕರೆಸಿಕೊಳ್ಳುವೆನೆಂದು ಹೇಳಿ, ಹೆಂಡತಿಯೊಂದಿಗೆ ಹೊರಟನು.

ವಾರಗಳೂ ತಿಂಗಳುಗಳೂ ಕಳೆದುವು. ಒಂದು ಊರಿನಿಂದ ಇನ್ನೊಂದು ಊರಿಗೂ, ಒಂದು ದೇಶದಿಂದ ಇನ್ನೊಂದು ದೇಶಕ್ಕೂ ದಂಪತಿಗಳು ಹೋಗುತ್ತಾ ಇದ್ದರು. ಗಂಡ ತನ್ನನ್ನು ತನ್ನ ದೇಶಕ್ಕೆ ಕರೆದೊಯ್ಯುವನೆಂಬ ದೃಢನಂಬುಗೆಯಲ್ಲಿ ಇಂದುಮತಿ ಇದ್ದಳು. ಅವನೊಂದಿಗೆ ಮರಗಳ ಬುಡದಲ್ಲಿ ಮಲಗಿದಳು. ನಡೆದು ಸುಸ್ತಾದರೂ ಅಯ್ಯೋ ಎನ್ನಲಿಲ್ಲ. ಗಂಡನ ಮೇಲೆ ಇನಿತೂ ಸಂದೇಹವಾಗಲಿಲ್ಲ ಆ ಸಾಧ್ವಿಗೆ.

ಎಷ್ಟೋ ಸಾರಿ ಸುದರ್ಶನನ ತಲೆಯೊಳಗೆ ದುರ್ಭಾವನೆ ತಲೆಹಾಕಿತ್ತು. ತನ್ನ ಹೆಂಡತಿಯನ್ನು ಮೋಸಪಡಿಸಿ ತಪ್ಪಿಸಿಕೊಂಡು ಹೋಗಿಬಿಡಬೇಕೆಂದು ತೋರಿತ್ತು. ತನ್ನ ಮೇಲೆ ಅಷ್ಟೊಂದು ಮೂಢ ವಿಶ್ವಾಸವಿಟ್ಟು ತನ್ನ ಕಷ್ಟಗಳನ್ನು ಸರಿಸಮನಾಗಿ ಹಂಚಿಕೊಳ್ಳುವ ಹೆಂಡತಿಗೆ ದ್ರೋಹ ಮಾಡಲು ಅವನ ಬುದ್ಧಿ ಒಪ್ಪಲಿಲ್ಲ. ರಾಜನ ಅಂತಃಪುರದಲ್ಲಿದ್ದುದಕ್ಕಿಂತಲೂ ಈಗ ಇಂದುಮತಿ ಅನೇಕ ಪಟ್ಟು ಹೆಚ್ಚು ಪ್ರಿಯಳಾಗಿ ತೋರಿದಳು ಅವನಿಗೆ.

ಮನೆಯಿಂದ ಹೊರಟು ಆರು ತಿಂಗಳ ಮೇಲೆ ಆ ಗಂಡ ಹೆಂಡಿರು ಕಳಿಂಗ ನಗರವನ್ನು ತಲಪಿದರು. ಇಂದುಮತಿ ಕೊಟ್ಟ ಕೆಲವು ನಗಗಳನ್ನು ಸುದರ್ಶನನು

ಅಲ್ಲಿಯ ವರ್ತಕರಿಗೆ ಮಾರಿದನು. ಬಳಿಕ ಅವರಿಬ್ಬರೂ ಒಟ್ಟಿಗೆ ಅಡುಗೂಲಜ್ಜಿಯ ಮನೆಯಲ್ಲಿ ತಂಗಿದರು. ಈ ದಂಪತಿಗಳನ್ನು ನೋಡಿದ ಕೂಡಲೇ ಆ ಅಡುಗೂಲಜ್ಜಿಗೆ ಏನೋ ಅನುಮಾನವಾಯಿತು. ಇಂದುಮತಿಯನ್ನು ನೋಡಿದರೆ ರಾಜಕುಮಾರಿಯಂತೆಯೇ ಕಾಣುತ್ತಾಳೆ. ಆದರೆ ಸುದರ್ಶನನನ್ನೇ ಅಡುಗೂಲಜ್ಜಿ ಪರೀಕ್ಷಿಸಿ ನೋಡುತ್ತಿದ್ದಳು. ಕಾರಣವೇನೆಂದರೆ ಹತ್ತು ಹದಿನೈದು ವರ್ಷಗಳ ಕೆಳಗೆ ಕಳಿಂಗರಾಜನ ಕುಮಾರನನ್ನು ಕಳ್ಳರು ಎತ್ತಿಕೊಂಡು ಹೋಗಿದ್ದರು. ಆ ಹುಡುಗ ಬದುಕಿರುತ್ತಿದ್ದರೆ ಸುದರ್ಶನನ ಹಾಗೆಯೇ ಆಗುತ್ತಲಿದ್ದ. ಇವನೇ ಅವನೇನೋ ? ಇಲ್ಲದಿದ್ದರೆ ರಾಜಕುಮಾರಿ ಇವನಿಗೆ ಹೆಂಡತಿಯಾಗಿ ಸಿಗುವಳೆ ! ಅಜ್ಜಿ ಇಂದುಮತಿಯನ್ನು ರಹಸ್ಯವಾಗಿ ಕರೆದು ವಿಚಾರಿಸಿದ್ದಕ್ಕೆ, "ನನಗೇ ಗೊತ್ತಿಲ್ಲ. ಪ್ರಚ್ಛನ್ನನಾಗಿ ತಿರುಗುವ ರಾಜಕುಮಾರ ಎಂಬುದಷ್ಟೇ ಗೊತ್ತು. ಅದರ ಕಾರಣ ನಾನರಿಯೆ" ಎಂದಳು. ಅವರಿಬ್ಬರೂ ಬಹಳ ದಿನಗಳಿಂದ ಪ್ರಯಾಣ ಮಾಡುತ್ತಲೇ ಇದ್ದಾರಂತೆ. ಗಂಡನಿಗೆ ಇಷ್ಟವಿಲ್ಲದ ವಿಷಯ ಹೆಚ್ಚು ಕೇಳಲು ಅವಳಿಂದಾಗದಂತೆ !

ಅಡುಗೂಲಜ್ಜಿಯ ಅನುಮಾನಕ್ಕೆ ಒಳ್ಳೆಯ ಬಲ ಬಂದಿತು. ಅವಳು ಸೀದಾ ಕಳಿಂಗರಾಜನ ಬಳಿಗೆ ಹೋಗಿ, "ಮಹಾಪ್ರಭೂ, ನನ್ನ ಮನೆಗೆ ಒಬ್ಬ ಹುಡುಗ ತನ್ನ ಹೆಂಡತಿಯೊಂದಿಗೆ ಬಂದಿದ್ದಾನೆ. ಆ ಹುಡುಗ ನಿಜ ಸಂಗತಿ ಮುಚ್ಚಿಟ್ಟು ತಿರುಗುವ ಹಾಗಿದೆ. ಕಳ್ಳರು ಎತ್ತಿಕೊಂಡು ಹೋದ ನಿಮ್ಮ ಮಗನ ಹಾಗೇ ನನಗೆ ಕಾಣುತ್ತಾನೆ." ಎಂದಳು.

"ಅವರಿಬ್ಬರನ್ನೂ ಒಂದುಸಾರಿ ಇಲ್ಲಿಗೆ ಕರೆದುಕೊಂಡು ಬಾ" ಎಂದನು ಕಳಿಂಗರಾಜ. ಅದರಂತೆ ಅಡುಗೂಲಜ್ಜಿ ಸುದರ್ಶನನನ್ನೂ, ಇಂದುಮತಿಯನ್ನೂ ರಾಜನ ಅಂತಃಪುರಕ್ಕೆ ಕರೆದುಕೊಂಡು ಹೋದಳು. ಸುದರ್ಶನನನ್ನು ನೋಡಿದ ಕೂಡಲೇ ರಾಜನೂ ರಾಣಿಯೂ ಬಹಳ ಸಂಭ್ರಮಗೊಂಡರು. ರಾಜನಿಗೆ ಅವನಲ್ಲಿ ತನ್ನ ರಾಣಿಯ ಹೋಲಿಕೆಯೂ ರಾಣಿಗೆ ತನ್ನ ಗಂಡನ ಹೋಲಿಕೆಯೂ ಕಾಣಿಸಿದುವು.

"ಕಂದಾ ! ಸುಧರ್ಮಾ ! ಕಳ್ಳರು ನಿನ್ನನ್ನೇನೂ ಮಾಡದೆ ಉಳಿಸಿದ್ದು ನಮ್ಮ ಭಾಗ್ಯ !" ಎಂದು ರಾಜನು ಸುದರ್ಶನನನ್ನು ಆಲಿಂಗಿಸಿಕೊಂಡನು.

ಇಂದುಮತಿ ವಿಚಿತ್ರವಾದ ಆನಂದದಲ್ಲಿ ತೇಲಿದಳು. ಆಮೇಲೆ ಕೇಳಬೇಕೆ ? ಸುದರ್ಶನನು ಸುಧರ್ಮನಾಗಿ ಅಭಿಷೇಕಗೊಂಡನು. ಪುರಂದರ ದೇಶಕ್ಕೆ ಈ ಶುಭವಾರ್ತೆ ಹೋಯಿತು. ಅಲ್ಲಿಯ ಮಂತ್ರಿ, "ನಾನಾಗಲೇ ಹೇಳಲಿಲ್ಲವೆ ? ಕಳಿಂಗದ ಯುವರಾಜನೇ ನಮ್ಮ ಅಳಿಯ ನೋಡಿದಿರಾ !" ಎಂದನು.



# ಸತ್ರವಿಲ್ಲದ ನಗರ

**ಒಂ**ದು ದಿನ ವಾರಂಗಲ್ಲು ನಗರದ ರಾಜನೂ ಮಂತ್ರಿಯೂ ಮಾರುವೇಷಗಳಲ್ಲಿ ಊರು ಪರೀಕ್ಷೆ ಮಾಡಲು ತಿರುಗಾಡುತ್ತಿದ್ದರು.

ಅವರ ಕಣ್ಣಿಗೆ ಒಂದು ದೃಶ್ಯ ಬಿದ್ದಿತು. ಅದೇನೆಂದರೆ, ಬೇರೆ ದೇಶದಿಂದ ವ್ಯಾಪಾರಕ್ಕಾಗಿ ಬಂದ ಇಬ್ಬರು ವರ್ತಕರು ದಾರಿಯಲ್ಲಿ ಹೋಗುವವರನ್ನು ನೋಡಿ, "ಅಯ್ಯಾ, ಈ ನಗರದಲ್ಲಿ ನಮ್ಮಂಥವರು ತಂಗಿಕೊಳ್ಳಲು ಧರ್ಮಶಾಲೆ ಎಲ್ಲಿದೆ?" ಎಂದು ಕೇಳಿದರು.

"ಈ ನಗರದಲ್ಲಿ ಧರ್ಮಶಾಲೆಗಳಿಲ್ಲವಲ್ಲಾ!" ಎಂದು ನಗರವಾಸಿಗಳು ಆ ವರ್ತಕರೊಂದಿಗೆ ಹೇಳಿದರು.

ವರ್ತಕರು ಆಶ್ಚರ್ಯದಿಂದ, "ಇಷ್ಟು ದೊಡ್ಡ ನಗರದಲ್ಲಿ ಪ್ರಯಾಣಿಕರಿಗೆ ಒಂದು ಸತ್ರವಿಲ್ಲವೆಂದರೆ, ಇಲ್ಲಿಯ ಪರಿಪಾಲನೆಯ ಚೆಂದವೆಂಥದೋ!" ಎಂದು ಅವಹೇಳನೆಯಿಂದ ಉದ್ಗರಿಸಿದರು.

ಆ ದಾರಿಯಾಗಿ ಬರುತ್ತಿದ್ದ ರಾಜಭಟನು ನಿಂತು ವರ್ತಕರ ಮಾತನ್ನು ಕೇಳಿ, "ಅಯ್ಯಾ, ಪರದೇಶದವರಿಗೆ ಸತ್ರಗಳಲ್ಲೆಲ್ಲ ಸೌಕರ್ಯವು ಸರಿಯಾಗಲಾರದೆಂದುಕೊಂಡು ನಮ್ಮ ರಾಜರು ಪ್ರಯಾಣಿಕರಿಗೆ ತಮ್ಮ ಭಟರ ಮನೆಗಳಲ್ಲಿಯೇ ತಂಗುವ ಏರ್ಪಾಡು ನಡೆಯುವಂತೆ ನಿಯಮಿಸಿದ್ದಾರೆ. ಬನ್ನಿ" ಎಂದು ಹೇಳಿ, ಆ ಭಟನು ವರ್ತಕರನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ತನ್ನ ಸ್ವಂತ ಖರ್ಚಿನಿಂದ ಅವರಿಗೆ ಸಮಸ್ತ ಉಪಚಾರಗಳನ್ನೂ ಮಾಡಿದನು.

ತನ್ನ ಗೌರವವನ್ನು ಎತ್ತಿ ಹಿಡಿದ ಆ ಭಟನನ್ನು ಮರುದಿನವೇ ರಾಜನು ಕರೆಯಿಸಿ, ಅವನಿಗೆ ತುಂಬಾ ಬಹುಮಾನ ಕೊಟ್ಟು, ನಗರದಲ್ಲಿ ಧರ್ಮಶಾಲೆಗಳನ್ನು ಏರ್ಪಡಿಸಿದನು.





# ದೇವೀಭಾಗವತ

ವಿಶ್ವಾಮಿತ್ರನು ತನ್ನ ತಪಸ್ಸಿನ ಶಕ್ತಿಯಿಂದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿಕೊಟ್ಟ ಮೇಲೆ, ತ್ರಿಶಂಕು ಪುತ್ರನಾದ ಹರಿಶ್ಚಂದ್ರನು ರಾಜ್ಯಭಾರ ಮಾಡಿಕೊಂಡಿದ್ದನು. ಅವನಿಗೆ ಸಂತಾನ ಭಾಗ್ಯ ಉಂಟಾಗಲಿಲ್ಲ. ಒಂದು ದಿನ ಅವನು ಕುಲಪುರೋಹಿತನಾದ ವಸಿಷ್ಠನನ್ನು ನೋಡಿ, "ಮಹಾತ್ಮರೇ, ನೀವು ದೈವಜ್ಞರಾಗಿ ಮಂತ್ರವೇತ್ತರಾಗಿ ಎಲ್ಲಾ ಬಲ್ಲವರಾಗಿರುವಿರಿ. ಆದುದರಿಂದ ನನಗೆ ಸಂತಾನವಾಗದಿರುವ ಕಾರಣವೇನೆಂಬುದನ್ನು ನೀವೇ ತಿಳಿದು ಹೇಳಬೇಕು. ನನ್ನ ಪ್ರಾರಬ್ಧ ಹೇಗಿದೆಯೋ ನಾನರಿಯೆ." ಎಂದು ದೀನನಾಗಿ ಕೇಳಿಕೊಂಡನು.

"ರಾಜಾ, ಸಂತಾನವಿಲ್ಲದಿರುವುದು ದೊಡ್ಡ ದುಃಖವೆಂಬ ಮಾತು ನಿಜವೇ. ನಾನೊಂದು ಉಪಾಯ ಹೇಳುತ್ತೇನೆ. ಸಂತಾನಕಾರಕನೆಂದು ಪ್ರಸಿದ್ಧನಾಗಿರುವವನು ವರುಣನೇ. ಆದುದರಿಂದ ನೀನು ಆ ವರುಣನನ್ನು ಭಕ್ತಿ ಶ್ರದ್ಧೆಗಳಿಂದ ಪೂಜಿಸಿ ತೃಪ್ತಿಪಡಿಸಿದರೆ ಅವನ ದಯೆಯಿಂದ ಸಂತಾನವಂತನಾಗಬಹುದು. ಮನುಷ್ಯ ಪ್ರಯತ್ನವಿಲ್ಲದೆ ಸುಮ್ಮನೆ ದೈವಾನುಕೂಲತೆಯಾಗದೆಂಬ ಸಂಗತಿ ನಿನಗೆ ತಿಳಿಯದುದೇನೂ ಅಲ್ಲ" ಎಂದನು ವಸಿಷ್ಠ.

ಹರಿಶ್ಚಂದ್ರನು ವಸಿಷ್ಠನ ಮಾತಿನ ಮೇಲೆ ವಿಶ್ವಾಸವಿಟ್ಟು, ಗಂಗಾತೀರಕ್ಕೆ ಹೋಗಿ ವರುಣನನ್ನು ಧ್ಯಾನಿಸುತ್ತ ತೀವ್ರ ತಪಸ್ಸಿಗೆ ಕುಳಿತನು. ಹಾಗಿರುವಾಗ ಒಂದು ದಿನ ವರುಣನು ಅವನ ಮುಂದೆ ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು.

ಹರಿಶ್ಚಂದ್ರನು ಅತ್ಯಾನಂದದಿಂದ, ತನಗೆ ಒಬ್ಬ ಪುತ್ರನನ್ನು ಪ್ರಸಾದಿಸಿ, ಸಂತಾನಹೀನನೆಂಬ ತನಗಿರುವ ಅಪವಾದವನ್ನು ಹೋಗಲಾಡಿಸಬೇಕೆಂದು ವರುಣನನ್ನು ಪ್ರಾರ್ಥಿಸಿದನು.

"ಹರಿಶ್ಚಂದ್ರಾ, ನಿನಗೆ ಉತ್ತಮ ಪುತ್ರನನ್ನೇ ಕೊಡುತ್ತೇನೆ. ಆದರೆ ಒಂದು ನಿಬಂಧನೆಗೆ ನೀನು ಒಪ್ಪಬೇಕು, ಆ ಪುತ್ರನನ್ನು ಯಜ್ಞಪಶುವಾಗಿ ಮಾಡಿ ನನಗೇ ಬಲಿಕೊಡಬೇಕು. ಇದಕ್ಕೆ ಒಪ್ಪಿದರೆ ಮಾತ್ರ ನಿನಗೆ ಪುತ್ರ ಹುಟ್ಟುತ್ತಾನೆ." ಎಂದು

೨೫. ಹರಿಶ್ಚಂದ್ರನ ಕಥೆ



ನೆಂದು ನಾಮಕರಣ ಮಾಡಿದನು. ದೇಶದಲ್ಲೆಲ್ಲಾ ಪುತ್ರೋತ್ಸವವು ದೊಡ್ಡ ರೀತಿಯಲ್ಲಿ ನಡೆಯಿತು. ಆಗ ವರುಣನು ವೃದ್ಧ ಬ್ರಾಹ್ಮಣನ ರೂಪದಲ್ಲಿ ಹರಿಶ್ಚಂದ್ರನ ಬಳಿಗೆ ಬಂದು, ಸ್ವಸ್ತಿವಾಚನಗಳನ್ನು ಹೇಳಿ, ತಾನು ಯಾರೆಂಬುದನ್ನು ಅವನಿಗೆ ಮಾತ್ರ ತಿಳಿಸಿ, "ಹರಿಶ್ಚಂದ್ರಾ, ನಾನು ಕೊಟ್ಟ ವರದಿಂದ ನಿನ್ನ ಸಂತಾನಹೀನತೆಯ ದೋಷ ಹೋಯಿತು. ನೀನು ನನಗೆ ಕೊಟ್ಟ ಮಾತು ನೆನಪಿದೆಯಷ್ಟೆ? ಇನ್ನು ತಡಮಾಡದೆ ಚಿತ್ತಶುದ್ಧಿಯಿಂದ ಹೇಳಿದ ಮಾತಿನಂತೆ ನಿನ್ನ ಮಗನನ್ನು ಯಜ್ಞಪಶುಮಾಡಿ ನನಗೆ ಬಲಿ ಕೊಟ್ಟು ಕೀರ್ತಿ ಶಾಲಿಯಾಗು" ಎಂದನು.

ಆ ಮಾತು ಕೇಳಿ ಹರಿಶ್ಚಂದ್ರನಿಗೆ ದೊಡ್ಡ ದಿಗಿಲು ಹಿಡಿಯಿತು. ಅಪರೂಪವಾಗಿ ತಪಸ್ಸುಮಾಡಿ ಪಡೆದ ಮುದ್ದಾದ ಈ ಎಳೆಗೂಸನ್ನು ವರುಣನಿಗೆ ಬಲಿ ಕೊಡುವುದು ಹೇಗೆ? ಕೈಯಾರೆ ಮಗನನ್ನು ಕೊಂದರೆ ಆ ಶೋಕವು ಸಾಯುವರೆಗೂ ಉಳಿದಿರುತ್ತದೆ. ಆ ಮೇಲೆ ತಾನಾದರೂ ಬದುಕಿ ಉಳಿಯುವುದು ಸಾಧ್ಯವೆ? ತಾನುಸತ್ತರೆ ರಾಣಿಯ ಗತಿ ಏನಾದೀತು?

ಹರಿಶ್ಚಂದ್ರನು ಸ್ವಲ್ಪ ಧೈರ್ಯವನ್ನು ಕೂಡಿಸಿಕೊಂಡು, ವರುಣನಿಗೆ ವಿನಯದಿಂದ ಕೈ ಮುಗಿದು, "ದೇವಾ! ಹೆತ್ತಸೂತಕವು ತಂದೆಗೆ ಹತ್ತು ದಿನಗಳೂ, ತಾಯಿಗೆ ಒಂದು ತಿಂಗಳೂ ಇರುವ ಸಂಗತಿ ನಿನಗೆ ತಿಳಿಯದುದಲ್ಲ. ಇಷ್ಟರೊಳಗೆ ನಾವು ಯಜ್ಞದೀಕ್ಷೆ ಹಿಡಿಯಲು ಹೇಗೆ ಸಾಧ್ಯ? ಶುದ್ಧ ಕಾಲವು ಬರುವವರೆಗೆ ಕಾದಿರಲಾಗದೆ?" ಎಂದನು.

"ಹಾಗಾದರೆ ಒಂದು ತಿಂಗಳು ದಾಟಿದ ಮೇಲೆ ಬರುತ್ತೇನೆ." ಎಂದು ಹೇಳಿ ವರುಣನು ಹೊರಟು ಹೋದನು.

ಹರಿಶ್ಚಂದ್ರನಿಗೆ ಹೋದ ಪ್ರಾಣ ತಿರುಗಿ ಬಂದ ಹಾಗಾಯಿತು. ಅವನು ಬ್ರಾಹ್ಮಣರಿಗೆ ಗೋವು

ವರುಣನು ಮುಗುಳು ನಗುತ್ತಾ ಹೇಳಿದನು. ಹರಿಶ್ಚಂದ್ರನಿಗೆ ಗಲ್ಲದ ಮೇಲೆ ಪೆಟ್ಟು ಬಿದ್ದಂತೆ ಕೇಳಿಸಿತು ಆ ಮಾತು. ಬೇರೇನೂ ಉಪಾಯಗಾಣದೆ, "ಗೊಡ್ಡು ಮನುಷ್ಯ ಅನಿಸಿಕೊಳ್ಳುವುದಕ್ಕಿಂತ ಇದು ಸ್ವಲ್ಪ ಮೇಲು. ನೀನು ಹೇಳಿದ ನಿಬಂಧನೆಗೆ ಒಪ್ಪುತ್ತೇನೆ. ಪುತ್ರನನ್ನು ಪ್ರಸಾದಿಸು ದೇವಾ" ಎಂದನು.

"ಹಾಗೇ ಆಗಲಿ. ನಿನಗೆ ಪುತ್ರನು ಹುಟ್ಟುತ್ತಾನೆ. ಇನ್ನು ಮನೆಗೆ ಹೋಗು" ಎಂದು ಹೇಳಿ ವರುಣನು ಅಂತರ್ಧಾನನಾದನು.

ಹರಿಶ್ಚಂದ್ರನು ಮನೆಗೆ ಹಿಂದಿರುಗಿ ತನ್ನ ಪಟ್ಟಮಹಿಷಿಯಾದ ಶೈಬ್ಯಳೊಂದಿಗೆ ನಡೆದ ಸಂಗತಿಯನ್ನು ಹೇಳಿದನು. ಅವಳುಕೂಡಾ ತನ್ನ ಬಂಜೆ ಎಂಬ ಕಳಂಕ ಹೋಗುವುದೆಂದು ಸಂತೋಷಪಟ್ಟಳು.

ತರುವಾಯ ರಾಣಿ ಗರ್ಭಿಣಿಯಾಗಿ, ಹತ್ತನೇ ತಿಂಗಳಿನಲ್ಲಿ ಮನ್ಮಥನಂತಹ ಮಗನನ್ನು ಪ್ರಸವಿಸಿದಳು. ಹರಿಶ್ಚಂದ್ರನು ತನ್ನ ಮಗನಿಗೆ ರೋಹಿತ

ಗಳನ್ನೂ, ಎಳ್ಳನ್ನೂ, ಬಂಗಾರವನ್ನೂ, ಭೂಮಿಯನ್ನೂ ದಾನಮಾಡಿ, ಮಗನನ್ನು ನೋಡುತ್ತ ಆನಂದಪುಲಕಿತನಾಗುತ್ತಿದ್ದನು. ಮಗನ ಬಾಲಲೀಲೆಗಳಿಂದ ದಿನಗಳು ಹೋದುದೇ ತಿಳಿಯಲಿಲ್ಲ.

ಒಂದು ತಿಂಗಳು ಕಳೆಯಿತು. ವರುಣನು ಬ್ರಾಹ್ಮಣ ವೇಷದಲ್ಲಿ ಹರಿಶ್ಚಂದ್ರನ ಬಳಿಗೆ ಬಂದು, ಇನ್ನು ಯಜ್ಞಮಾಡುವಂತೆ ಹೇಳಿದನು.

ಹರಿಶ್ಚಂದ್ರನು ಭಾರವಾದ ಎದೆಯಿಂದ ವರುಣನಿಗೆ ನಮಸ್ಕಾರ ಮಾಡಿ, "ದೇವಾ ! ನಿನ್ನ ಬರುವಿಕೆಯಿಂದ ನನ್ನ ಮನೆ ಪಾವನವಾಯಿತು. ಈಗ ನಾನು ನನ್ನ ಕಂದನನ್ನು ಯಜ್ಞ ಪಶುವನ್ನಾಗಿ ಮಾಡಿ ಯಜ್ಞಮಾಡುವುದು ಹೇಗೆ? ನಿನಗೆ ತಿಳಿಯದ ಸಂಗತಿ ಏನಿದೆ ? ಹಲ್ಲು ಮೊಳೆಯದ ಪಶು ಬಲಿಗೆ ಯೋಗ್ಯವಲ್ಲವೆನ್ನುವರಲ್ಲವೆ?" ಎಂದನು.

"ಸರಿ. ಹುಡುಗನಿಗೆ ಹಲ್ಲು ಮೊಳೆತಕೂಡಲೇ ಬಲಿ ಕೊಟ್ಟುಬಿಡು !" ಎಂದು ಹೇಳಿ ವರುಣನು ಹೊರಟು ಹೋದನು.

ರೋಹಿತನು ಬಾಲಲೀಲೆಗಳನ್ನು ತೋರಿಸುತ್ತ ಬೆಳೆಯುತ್ತಿರಲು, ಅವನಿಗೆ ಹಲ್ಲು ಮೊಳೆಯಿತು. ಆಗಲೇ ವರುಣನು ಹರಿಶ್ಚಂದ್ರನ ಬಳಿಗೆ ಬಂದು, ಯಜ್ಞಮಾಡಿ ಹುಡುಗನನ್ನು ಬಲಿ ಕೊಡುವಂತೆ ಹೇಳಿ ಕುಳಿತುಬಿಟ್ಟನು.

ಹರಿಶ್ಚಂದ್ರನು ವರುಣನಿಗೆ ಸಮಸ್ತ ಮರ್ಯಾದೆಗಳನ್ನೂ ಮಾಡಿ ವಿನಯದಿಂದ ಕೈಮುಗಿದು, "ದೇವಾ ! ನಿನಗೆ ತಿಳಿಯದುದು ಏನಿದೆ ? ಹುಟ್ಟು ಕೂದಲನ್ನು ಇನ್ನೂ ತೆಗೆಯಲಿಲ್ಲ. ಚೌಲಕರ್ಮವಾಗಲಿಲ್ಲ. ಅಂತಹ ಮಗು ಯಜ್ಞಕರ್ಮಕ್ಕೆ ಸಲ್ಲಲಾರನೆಂದು ಹಿರಿಯರು ಹೇಳುತ್ತಾರಲ್ಲವೇ? ಚೌಲಕರ್ಮವಾದ ಕೂಡಲೇ ಹುಡುಗನನ್ನು ನಿನಗೆ ಬಲಿ ಕೊಡುತ್ತೇನೆ" ಎಂದನು ಹರಿಶ್ಚಂದ್ರ.

"ಎಲೋ ರಾಜನೇ, ನೀನು ಮಗನ ಮೇಲಿನ ಮಮಕಾರದಿಂದ ಸುಳ್ಳು ಹೇಳುತ್ತ ಅಲೆದಾಡಿಸುವಿ. ನಿನ್ನಲ್ಲಿ ಕಪಟವಿದೆಯೆಂದು ನನಗೆ ಕಾಣುತ್ತದೆ. ಎಚ್ಚರ ! ಚೌಲಕರ್ಮವಾದ ಕೂಡಲೇ ಮಗನನ್ನು






ನನಗೆ ಬಲಿ ಕೊಡದೇ ಹೋದ ಪಕ್ಷದಲ್ಲಿ ನಿನಗೆ ಘೋರವಾದ ಶಾಪ ಕೊಡುತ್ತೇನೆ. ಮಹಾತ್ಮನಾದ ಇಕ್ಷ್ವಾಕು ವಂಶದಲ್ಲಿ ಹುಟ್ಟಿ ಹೇಳಿದ ಮಾತು ನಡೆಯಿಸದೇ ಹೋದೆಯೆಂಬ ಅಪಕೀರ್ತಿಗೆ ಪಾಲಾಗ ಬೇಡ ! ಆ ಮೇಲೆ ಕ್ಷಮಿಸಲಾರೆನೆಂದು ತಿಳಿ ! ಎಚ್ಚರದಲ್ಲಿರು ! ಬರುತ್ತೇನೆ !" ಎಂದು ಹೇಳಿ ವರುಣನು ಹೊರಟು ಹೋದನು.

ರೋಹಿತನಿಗೆ ಚೌಲದ ಪ್ರಾಯ ಬಂದಿತು. ಹರಿಶ್ಚಂದ್ರನು ಮಗನ ಚೌಲವನ್ನು ವೈಭವದಿಂದ ಮಾಡಿ, ಹೆಂಡತಿಯೊಂದಿಗೆ ಮಗನನ್ನು ತೊಡೆಯಲ್ಲಿ ಕೂಡಿಸಿಕೊಂಡು ಕೊಂಡಾಡಿಕೊಂಡಿರುವಾಗ ವರುಣನು ಬಂದೇ ಬಂದನು.

"ರಾಜಾ, ಮಗನ ಚೌಲಕರ್ಮವಾಗಿ ಹುಟ್ಟು ಕೂದಲು ಹೋಯಿತಲ್ಲವೇ ? ಇನ್ನು ತಡವೇಕೆ ? ಯಜ್ಞವನ್ನು ಪ್ರಾರಂಭಿಸು ! " ಎಂದನು ವರುಣ. ಹರಿಶ್ಚಂದ್ರನು ಕೂಡಲೇ ಉತ್ತರಕೊಟ್ಟನು :

"ಅದನ್ನು ನಾನು ಮರೆಯಲಿಲ್ಲ ಸ್ವಾಮಿ. ಆದರೆ ಈ ಹುಡುಗ ಯಜ್ಞ ಪಶುವಾಗಲು ಉಪಯೋಗ ವಿಲ್ಲ. ಉಪನಯನವಾಗದೇ ಇವನಿಗೆ ದ್ವಿಜತ್ವ ಬಾರದು, ಅದುವರೆಗೂ ಇವನು ನಾಲ್ಕನೇ ವರ್ಣ ದವನೆಂದೇ ಲೆಕ್ಕವಲ್ಲವೇ ? ವಿಧ್ಯುಕ್ತವಾದ ಕರ್ಮ ಗಳಿಗೆ ಉಪನಯನವಾದ ಮೇಲೆಯೇ ಯೋಗ್ಯ ನಾಗುವನೆಂದು ನಿನಗೂ ತಿಳಿಯದ್ದಲ್ಲವಷ್ಟೇ ? ಅದೊಂದು ನಡೆದು ಹೋಗಲಿ " ಎಂದನು.

ಬ್ರಾಹ್ಮಣನಿಗೆ ಎಂಟನೆಯ ವಯಸ್ಸು ತುಂಬಿ ದಾಗಲೂ, ಕ್ಷತ್ರಿಯನಿಗೆ ಹನ್ನೊಂದನೆಯ ವಯಸ್ಸಿಗೂ, ವೈಶ್ಯನಿಗೆ ಹನ್ನೆರಡನೆಯ ವಯಸ್ಸಿಗೂ ಉಪನಯನ ಮಾಡಬೇಕೆಂದು ಶಾಸ್ತ್ರಗಳು ನಿರ್ಣಯಿ ಸಿವೆ. ಆದುದರಿಂದ ಹನ್ನೊಂದನೆಯ ವಯಸ್ಸಿನಲ್ಲಿ ರೋಹಿತನಿಗೆ ಉಪನಯನ ನಡೆಯಿಸಿ, ಶಾಸ್ತ್ರೋಕ್ತ ವಾಗಿ ಯಜ್ಞಮಾಡಿ, ಅದರಲ್ಲಿ ಅವನನ್ನು ಯಜ್ಞ ಪಶುಮಾಡಿ ಬಲಿ ಕೊಡುತ್ತೇನೆಂದು ಹರಿಶ್ಚಂದ್ರನು ವರುಣನೊಂದಿಗೆ ಹೇಳಿದನು.

ಹರಿಶ್ಚಂದ್ರನ ಮಾತಿಗೆ ವರುಣನು ತೃಪ್ತನಾಗಿ ಹೊರಟು ಹೋದನು. ಆಮೇಲೆ ಹರಿಶ್ಚಂದ್ರನು ತನ್ನ ಮಗನನ್ನು ನೋಡುತ್ತ ಮುದ್ದಿಸುತ್ತ ಆನಂದಿ ಸುತ್ತ ದಿನಗಳನ್ನು ಎಣಿಸುತ್ತ ಕಾಲವನ್ನು ಕಳೆಯ ತೊಡಗಿದನು.

ಕಾಲಕ್ರಮದಲ್ಲಿ ರೋಹಿತನಿಗೆ ಹನ್ನೊಂದು ವಯಸ್ಸು ತುಂಬಿ ಹನ್ನೆರಡನೇ ವರ್ಷ ತಲೆಹಾಕಿತು. ಹರಿಶ್ಚಂದ್ರನ ಗುಂಡಿಗೆ ಭೀತಿಯಿಂದ ಹೊಡೆದು ಕೊಳ್ಳತೊಡಗಿತು. ಮಗನಿಗೆ ಶಾಸ್ತ್ರೋಕ್ತವಾಗಿ ಬಹು ವೈಭವದಿಂದ ಉಪನಯನವನ್ನು ಜರುಗಿಸಿದ್ದೂ ಆಯಿತು. ವರುಣನು ಬಂದು ಯಜ್ಞ ಮಾಡುವಂತೆ ಹೇಳಿ ಹರಿಶ್ಚಂದ್ರನ ಮುಂದೆ ಕುಳಿತನು.

"ಯಜ್ಞ ಮಾಡಬೇಕು ನಿಜ. ನಾನೇನೂ ಒಲ್ಲೆ ಎನ್ನಲಾರೆ. ಆದರೆ ಹುಡುಗ ಈಗತಾನೇ ವೇದಾ



ಭ್ಯಾಸಕ್ಕೆ ತೊಡಗಿದ್ದಾನೆ. ನನ್ನ ಮೇಲೆ ಅನುಗ್ರಹ ವಿಟ್ಟು ಇಷ್ಟು ಕಾಲ ತಾಳಿದ ಹಾಗೆ ಅವನ ವಿದ್ಯಾಭ್ಯಾಸ ಪೂರ್ತಿಯಾಗುವವರೆಗೂ ತಾಳು ದೇವಾ. ಆಮೇಲೆ ಖಂಡಿತವಾಗಿ ಬಲಿ ಕೊಡುತ್ತೇನೆ" ಎಂದನು ಹರಿಶ್ಚಂದ್ರ,

ವರುಣನಿಗೆ ಕೊಪ ಬಂದಿತು. "ರಾಜಾ, ನೀನು ಜಂಬುಕ ವಿನಯದಿಂದ ನನಗೆ ಸಮಾಧಾನ ಹೇಳುತ್ತಾ ಕಾಲಹರಣ ಮಾಡುವಿ. ಮಗನ ಮೇಲಿನ ಮಮಕಾರವನ್ನು ಬಿಡಲಾಗದೆ ನನ್ನನ್ನು ಹೀಗೆ ಆಟ ಆಡಿಸುವೆಯಾ? ಆದರೂ ತಾಳ್ಮೆ ವಹಿಸಿ, ನಿನ್ನ ಮಾತನ್ನು ನಂಬಿ ಈ ಸಾರಿ ಹೊರಟು ಹೋಗುತ್ತೇನೆ. ನಿನ್ನ ಮಗನ ವಿದ್ಯಾಭ್ಯಾಸ ಮುಗಿದ ಕೂಡಲೇ ಬರುತ್ತೇನೆ. ತಾಳ್ಮೆಗೂ ಒಂದು ಎಲ್ಲೆ ಇದೆ ಎಂಬುದು ನೆನಪಿರಲಿ!" ಎಂದು ಹೇಳಿ ವರುಣನು ಹೊರಟುಹೋದನು.

ಮತ್ತೆ ಕೆಲವು ವರ್ಷ ಕಳೆಯಲು ರೋಹಿತನ ವಿದ್ಯಾಭ್ಯಾಸ ಮುಗಿಯುತ್ತಾ ಬರಲು, "ವರುಣನು ಬಂದು ಕುಳಿತುಬಿಡುತ್ತಾನಲ್ಲಾ" ಎಂಬ ಭೀತಿಯಿಂದ ಹರಿಶ್ಚಂದ್ರನ ಮುಖ ದಿನದಿಂದ ದಿನಕ್ಕೆ ಕುಂದುತ್ತಾ ಹೋಯಿತು. ಅದನ್ನು ಗಮನಿಸಿ ರೋಹಿತನು, "ಏಕೆ ಹೀಗೆ ಚಿಂತೆಯಿಂದಿರುವಿರಿ ಅಪ್ಪಾ" ಎಂದು ಒತ್ತಾಯಿಸಿ ಕೇಳಿ ಕಾರಣವನ್ನು ತಿಳಿದುಕೊಂಡನು.

ಅದರಿಂದ ರೋಹಿತನಿಗೂ ಪ್ರಾಣಭಯ ಹಿಡಿಯಿತು. ಮಂತ್ರಿಯ ಮಗನೊಂದಿಗೆ ಈ ಸಮಾಚಾರ ಹೇಳಿದನು. ಅವನ ಸಲಹೆಯಂತೆ ರೋಹಿತನು ಒಂದು ದಿವ ಯಾರಿಗೂ ಹೇಳದೆ ಅರಣ್ಯಕ್ಕೆ ಓಡಿಹೋದನು.

ಮನೆಯಲ್ಲಿ ಮಗನನ್ನು ಕಾಣದೆ ಹರಿಶ್ಚಂದ್ರನು ಇನ್ನಷ್ಟು ದಿಗಿಲಿಗೆ ಬಿದ್ದನು. ಭಟರನ್ನು ಕಳುಹಿಸಿ ಎಲ್ಲೆಲ್ಲೋ ಹುಡುಕಿಸಿದನು. ಎಲ್ಲಿಯೂ ಮಗನ ಜಾಡು ತಿಳಿಯಲಿಲ್ಲ. ಇನ್ನು ವರುಣನು ಬಂದು ಏನು ಹೇಳುವನೋ, ಎಂತಹ ಕ್ರೂರವಾದ ಶಾಪ ಕೊಡುವನೋ ಎಂದು ಮತ್ತಿಷ್ಟು ಭಯಗೊಂಡನು.

ಅಷ್ಟರಲ್ಲಿ ಯಜ್ಞ ಮಾಡುವಂತೆ ಹೇಳುತ್ತ ವರುಣನು ಬಂದೇ ಬಂದನು. ಹರಿಶ್ಚಂದ್ರನು ಭಯದಿಂದ ನಡುಗುತ್ತ ವರುಣನಿಗೆ ವಂದಿಸಿ, "ನನ್ನ ಮಗನು ಸಾಯುವುದಕ್ಕೆ ಹೆದರಿ ಎತ್ತಲೋ ಓಡಿಹೋದ. ನಾನೇನು ಮಾಡಲಿ? ಎಲ್ಲಾ ಕಡೆಯೂ ಹುಡುಕಾಡಿಸಿ ನೋಡಿದೆ. ಗುಡ್ಡಗಳು, ಕಾಡುಗಳು ಹಳ್ಳಿಗಳು, ನಗರಗಳು ಎಲ್ಲಾ ಶೋಧಿಸಿಯಾಯಿತು. ಪ್ರಯೋಜನವಿಲ್ಲದೆ ಹೋಯಿತು. ನಾನೇ ದೋಷಿಯಾದೆ. ನನಗೇನೂ ತೋರುವುದಿಲ್ಲ ವರುಣ ಭಗವಾನ್!" ಎಂದನು,

"ಕಡೆಗೂ ನನ್ನನ್ನು ಮೋಸ ಮಾಡಿದೆಯಾ? ಜಲೋದರವನ್ನು ತೆಗೆದುಕೋ!" ಎಂದು



ಹರಿಶ್ಚಂದ್ರನನ್ನು ಶಪಿಸಿ, ವರುಣನು ತಟ್ಟನೆ ಅಲ್ಲಿಂದೆದ್ದು ಹೊರಟು ಹೋದನು.

ನರಳುವ ನರಿಯ ಮೇಲೆ ತಾಳೇಕಾಯಿ ಬಿದ್ದಂತೆ, ಹರಿಶ್ಚಂದ್ರನು ಮಗನ ಜಾಡು ತಿಳಿಯದೆ ದುಃಖ ದಿಂದಿರುವಾಗ, ವರುಣನ ಶಾಪ ಬಂದು ಅವನಿಗೆ ಜಲೋದರವ್ಯಾಧಿಯೂ ಶುರುವಾಯಿತು.

ಮುಂದೆ ಒಂದು ವರ್ಷ ಕಳೆಯಿತು. ರೋಹಿತ ನಿಗೆ ತಂದೆಯ ಆರೋಗ್ಯ ಕೆಟ್ಟು ಹೋಗಿರುವ ಸಮಾಚಾರ ಹೇಗೋ ಗೊತ್ತಾಯಿತು. ಅವನು ಕಳವಳಪಡುತ್ತ ತಂದೆಯನ್ನು ನೋಡಲು ಹೊರಟು ಅಡಗಿದ ಜಾಗದಿಂದ ಹೊರಬಿದ್ದನು. ಅದನ್ನು ತಿಳಿದು ಇಂದ್ರನು ಬ್ರಾಹ್ಮಣ ರೂಪದಲ್ಲಿ ಬಂದು ಅವನನ್ನು ತಡೆದು, "ತಂದೆಯ ಬಳಿಗೆ ಏಕೆ ಹೋಗುವಿ? ತನ್ನ ರೋಗ ವಾಸಿಯಾಗಲಿಕ್ಕಾಗಿ ನಿನ್ನನ್ನು ವರುಣನಿಗೆ ಬಲಿಕೊಟ್ಟು ಬಿಡುತ್ತಾನೆ. ನಿಷ್ಕಾರಣವಾಗಿ ಏಕೆ ಸಾಯಲು ಹೋಗುವಿ? ನಿನ್ನ ತಂದೆ ಸಾಯುವ ವರೆಗೂ ತಡೆದುಕೋ. ಆಮೇಲೆ ಹೋಗಿ ನಿಶ್ಚಿಂತೆಯಿಂದ ರಾಜ್ಯಭಾರ ಮಾಡು. ಅಷ್ಟರವರೆಗೆ ಮನಸ್ಸು ಕಲ್ಲು ಮಾಡಿ ಕೊಂಡಿರು." ಎಂದು ಸಲಹೆ ಮಾಡಿದನು.

ಮತ್ತೊಂದು ವರ್ಷ ಕಳೆಯಿತು. ತನ್ನ ತಂದೆ ಜಲೋದರ ರೋಗದಿಂದ ನರುಳುತ್ತಿದ್ದಾನೆಂದು ಗೊತ್ತಾಗಿ ರೋಹಿತನಿಗೆ ತಡೆಯಲಾಗಲಿಲ್ಲ. ಸಾಯಲಿಕ್ಕೇ ಸಿದ್ಧನಾಗಿ ಮತ್ತೊಂದು ಸಾರಿ ಮನೆಯ ಕಡೆಗೆ ಹೊರಟನು. ಈ ಸಾರಿ ಕೂಡಾ ಇಂದ್ರನು ಬಂದು, ಹೋಗ ಬೇಡವೆಂದು ಅವನನ್ನು ತಡೆದು ಹಿಂದಿರುಗಿಸಿದನು.

ಅಲ್ಲಿ ಹರಿಶ್ಚಂದ್ರನು ಜಲೋದರದ ಸಂಕಟವನ್ನು ಭರಿಸಿಕೊಳ್ಳಲಾಗದೆ, ಅದಕ್ಕೇನಾದರೂ ಉಪಾಯ ಹೇಳುವಂತೆ ವಸಿಷ್ಠನನ್ನು ಕೇಳಿದನು. ಅದಕ್ಕೆ ವಸಿಷ್ಠನು ಹೀಗೆಂದನು:

"ವರುಣನು ಬಲಿ ಕೇಳುವುದು ನಿನ್ನ ಮಗನನ್ನು ತಾನೇ? ಪುತ್ರರೆನಿಸುವವರು ಹತ್ತು ಬಗೆಯಾಗಿದ್ದಾರೆ. ಅವುಗಳಲ್ಲಿ ಕೊಂಡುಕೊಂಡವನು ಕಡಾ ಪುತ್ರನೆನಿಸು ತ್ತಾನೆ. ಆದುದರಿಂದ ಯಾವ ಹುಡುಗನನ್ನಾದರೂ ಕೊಂಡುಕೊಂಡು ವರುಣನಿಗೆ ಬಲಿಕೊಟ್ಟು ಶಾಪ ದಿಂದ ವಿಮೋಚನೆ ಪಡೆಯಬಹುದು."

ವಸಿಷ್ಠನ ಸಲಹೆಯಂತೆ ಹರಿಶ್ಚಂದ್ರನು ತನಗಾಗಿ ಒಬ್ಬ ಮಗನನ್ನು ಕೊಂಡುಕೊಂಡು ಬರುವಂತೆ ಮಂತ್ರಿಯನ್ನು ಕಳುಹಿಸಿದನು. ಮಂತ್ರಿ ಎಲ್ಲೆಲ್ಲೋ ಹುಡುಕಿ ಹುಡುಕಿ, ಕಡೆಗೆ ಪರಮ ದರಿದ್ರನಾದ ಅಜೀಗರ್ತನೆಂಬ ಒಬ್ಬ ಬ್ರಾಹ್ಮಣನನ್ನು ಕಂಡು ಹಿಡಿದನು. ಅವನಿಗೆ ಮೂವರು ಪುತ್ರರಿದ್ದರು. ಶುನಃಪುಚ್ಛ, ಶುನಶ್ಶೇಪ, ಶುನೋಲಾಂಗೂಲ ಎಂದು ಆ ಮೂವರ ಹೆಸರುಗಳು.

ಅಜೀಗರ್ತನೊಂದಿಗೆ ಹರಿಶ್ಚಂದ್ರನ ಮಂತ್ರಿ "ಅಯ್ಯಾ, ನಮ್ಮ ರಾಜನಿಗೆ ಬಂದ ಜಲೋದರ

ರೋಗದಿಂದ ಬಿಡುಗಡೆಯಾಗಲು, ನಿನ್ನ ಒಬ್ಬ ಪುತ್ರನನ್ನು ನೂರು ಗೋವುಗಳ ಬೆಲೆಗೆ ಕೊಡುವಿಯಾ ? " ಎಂದು ಕೇಳಿದನು.

ಅಷ್ಟದರಿದ್ರನಾದ ಅಜೀಗರ್ತನು, ಈ ಮಾತಿಗೆ ಅತ್ಯಾನಂದಗೊಂಡು, ತನ್ನ ಹಿರಿಯ ಮಗನ ಹೊರತು ಉಳಿದಿಬ್ಬರಲ್ಲಿ ಯಾರನ್ನಾದರೂ ಮಾರಲುಸಿದ್ಧನಾದನು. ಮೂರನೇ ಮಗನನ್ನು ತಾಯಿ ಕೊಡಲಾರೆನೆಂದಳು. ಆದುದರಿಂದ ಆ ಬ್ರಾಹ್ಮಣನು ಎರಡನೇ ಮಗನಾದ ಶನಶ್ಶೇಪನನ್ನು ಹರಿಶ್ಚಂದ್ರನ ಮಂತ್ರಿಗೆ ಮಾರಿಬಿಟ್ಟನು. ಮಂತ್ರಿ ಅವನನ್ನು ಹರಿಶ್ಚಂದ್ರನ ಬಳಿಗೆ ಕರೆದು ತಂದನು.

ಶುನಶ್ಶೇಪನನ್ನು ಯಜ್ಞ ಪಶುವನ್ನಾಗಿ ಮಾಡಿ ಯೂಪಸ್ತಂಭಕ್ಕೆ ಕಟ್ಟಿ, ರಾಜನು ಯಾಗದೀಕ್ಷೆ ಕೈಕೊಂಡು, ಯಜ್ಞ ಮಾಡಲು ಪ್ರಾರಂಭಿಸಿದನು. ಇದನ್ನು ನೋಡಿ ಮುನಿಗಳಿಗೆಲ್ಲಾ ಬಹಳ ದುಃಖವಾಯಿತು. ಶುನಶ್ಶೇಪನು ತನಗೆ ಬರಲಿರುವ ಮರಣವನ್ನು ನೆನೆದು ಒಂದೇ ಸಮನೆ ಅಳಲು ತೊಡಗಿದನು. ಹುಡುಗನನ್ನು ವಧೆಮಾಡುವವನು ಕೂಡ ಹೃದಯ ಕರಗಿ ಇವನನ್ನು ಕೊಲ್ಲಲು ನನಗಾಗುವುದಿಲ್ಲವೆಂದನು.

ಆಗ ಹರಿಶ್ಚಂದ್ರನು ಸದಸ್ಯರನ್ನು ನೋಡಿ, "ಈಗ ಏನು ಮಾಡಬೇಕು ? " ಎಂದು ಕೇಳಿದನು. ಸಭೆಯಲ್ಲಿ ಗಜಿಬಿಜಿ ಮಾತುಗಳೇ ಹೊರಟುವಲ್ಲದೆ ನಿರ್ಣಯಿಸಿ ಹೇಳಲು ಯಾರಿಗೂ ಸಾಧ್ಯವಾಗಲಿಲ್ಲ. ಶುನಶ್ಶೇಪನಂತೂ ಕಲ್ಲುಕರಗಿ ಹರಿಯುವ ಹಾಗೆ ಅಳುತ್ತಲೇ ಇದ್ದಾನೆ.

ಆಗ ಸಭಾಸದರ ಮಧ್ಯದಿಂದ ಅಜೀಗರ್ತನು ತಟಕ್ಕನೆದ್ದು, "ರಾಜಾ, ಈ ಬಲಿ ಪಶುವನ್ನು ನಾನು ವಧಿಸುತ್ತೇನೆ. ನನಗೆ ಮೊದಲು ಕೊಟ್ಟುದಕ್ಕಿಂತ ಎರಡು ಪಾಲು ಗೋವುಗಳನ್ನು ಕೊಡುವಿರಾ ? " ಎಂದು ಕೇಳಿದನು.

ಹರಿಶ್ಚಂದ್ರನು ಸಂತೋಷಪಟ್ಟು ಒಪ್ಪಿಕೊಂಡನು. ಸಭೆಯಲ್ಲಿ ಹಾಹಾಕಾರಗಳೆದ್ದುವು. "ಎಂಥ ದಾರುಣ! ಇವನು ಬ್ರಾಹ್ಮಣನಲ್ಲ, ಪಿಶಾಚಿ ! ತನ್ನ ಲಾಭಕ್ಕಾಗಿ



ಸ್ವಂತ ಮಗನನ್ನೇ ಕೊಲೆಮಾಡಲು ಸಿದ್ಧನಾದ ಮಹಾಪಾಪಿ ! ಇವನ ಮುಖ ನೋಡಬಾರದು !" ಎಂದು ಎಲ್ಲರೂ ಅಜೀಗರ್ತನನ್ನು ಬಯ್ದರು.

ಅಷ್ಟರಲ್ಲಿ ವಿಶ್ವಾಮಿತ್ರನು ಅಲ್ಲಿಗೆ ಬಂದು, ಸಂಗತಿ ತಿಳಿದು, ಶುನಶ್ಶೇಪನನ್ನು ನೋಡಿ ಕನಿಕರಪಟ್ಟು, " ಹರಿಶ್ಚಂದ್ರಾ, ಪಾಪ ಭೂಯಿಷ್ಟವಾದ ಈ ಯಜ್ಞ ವನ್ನು ನಿಲ್ಲಿಸು. ನಿನ್ನ ಜೀವ ನಿನಗೆಷ್ಟು ಪ್ರೀತಿಯೋ ಈ ಹುಡುಗನಿಗೂ ಅವನ ಜೀವ ಅಷ್ಟೇ ಪ್ರೀತಿ ಯಲ್ಲವೇ ? ಶಾಪಗ್ರಸ್ತನಾದ ನಿನ್ನ ತಂದೆಯನ್ನು ನಾನು ಸ್ವರ್ಗಕ್ಕೆ ಕಳುಹಿಸಿದೆನು. ಅದಕ್ಕಾದರೂ ನನ್ನ ಮಾತುಕೇಳಿ ಈ ಬ್ರಾಹ್ಮಣ ಬಾಲನನ್ನು ಬಿಟ್ಟುಬಿಡು " ಎಂದನು.

" ಅಯ್ಯಾ ! ಮಹರ್ಷೇ ! ನಾನು ಈ ಜಲೋ ದರದ ಬಾಧೆಯನ್ನು ತಾಳಲಾಗದಿದ್ದೇನೆ. ದಯ ಮಾಡಿ ಯಾಗಭಂಗವಾಗುವಂತೆ ಮಾಡ ಬೇಡಿ. ನಾನು ಈ ಹುಡುಗನನ್ನು ಯಜ್ಞ ಪಶುವಾಗಲಿಕ್ಕೇ ಕೊಂಡುಕೊಂಡೆನು " ಎಂದನು ಹರಿಶ್ಚಂದ್ರ.

ವಿಶ್ವಾಮಿತ್ರನಿಗೆ ಕೋಪ ಬಂದಿತು. ಅವನು ಶುನಶ್ಶೇಪನ ಬಳಿಗೆ ಹೋಗಿ, " ಈ ರಾಜನು ನಿನ್ನನ್ನೇನೂ ಮಾಡಲಾರ. ನಾನು ನಿನಗೊಂದು ಮಂತ್ರವನ್ನು ಹೇಳುತ್ತೇನೆ. ಅದರಿಂದ ನಿನಗೆ ಸುಖವಾಗುತ್ತದೆ. ಇನ್ನೇನೂ ಹೆದರ ಬೇಡ!" ಎಂದು ಅಭಯವಿತ್ತು, ಅವನ ಕಿವಿಯಲ್ಲಿ ಒಂದು ದಿವ್ಯ ಮಂತ್ರವನ್ನು ಉಪದೇಶಿಸಿದನು.

ವಿಶ್ವಾಮಿತ್ರನು ಹೇಳಿಕೊಟ್ಟ ಮಂತ್ರವನ್ನು ಶುನಶ್ಶೇಪನು ಜಪಿಸುತ್ತಿರಲು, ವರುಣನೇ ಅಲ್ಲಿ ಪ್ರತ್ಯಕ್ಷನಾದನು. "ಯಜ್ಞ ಮುಗಿಯಿತು. ನಾನು ತೃಪ್ತನಾದೆ ! ಹರಿಶ್ಚಂದ್ರನ ಶಾಪ ಹಿಂದೆಗೆದು ಕೊಂಡೆನು." ಎಂದು ಹೇಳಿ ವರುಣನು ಶುನಶ್ಶೇಪ ನನ್ನು ಬಿಡುಗಡೆ ಮಾಡಿ ಮಾಯವಾದನು. ಆಗಲೇ ಹರಿಶ್ಚಂದ್ರನ ಜಲೋದರ ವ್ಯಾಧಿಯೂ ಮಾಯ ವಾಯಿತು.

ಬಾಲಕ ಶುನಶ್ಶೇಪನು ಸಭೆಗೆ ನಮಸ್ಕಾರ ಮಾಡಿ " ಅಯ್ಯಗಳಿರಾ! ಈಗ ನನ್ನ ತಂದೆ ಯಾರೆಂಬುದನ್ನು ನೀವು ನಿರ್ಣಯಿಸಿದರೆ, ನಾನು ಅವರೊಂದಿಗೆ ಹೋಗುತ್ತೇನೆ " ಎಂದನು.

ಕೆಲವರು ಶುನಶ್ಶೇಪನ ತಂದೆ ಹರಿಶ್ಚಂದ್ರನೆಂದರು; ಕೆಲವರು ಅಜೀಗರ್ತನೆಂದರು ; ಮತ್ತೆ ಕೆಲವರು ವರುಣನೇ ಎಂದರು. ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳಿದರು.

ವಸಿಷ್ಠನು ಮಾತ್ರ ವಿಶ್ವಾಮಿತ್ರನೇ ಶುನಶ್ಶೇಪನಿಗೆ ತಂದೆಯೆಂದು ಸ್ಪಷ್ಟವಾಗಿ ಹೇಳಿದನು. ಅಂತೆಯೇ ಶುನಶ್ಶೇಪನು ವಿಶ್ವಾಮಿತ್ರನೊಂದಿಗೇ ಸಂತೋಷ ದಿಂದ ಹೊರಟು ಹೋದನು.





# ಪಾತಾಳ ರಾಕ್ಷಸ

ಒಂದು ಕಾಲದಲ್ಲಿ ಮಗಧ ದೇಶವನ್ನು ಶಕ್ತಿಸೇನನೆಂಬ ರಾಜನು ಪಾಲಿಸಿಕೊಂಡಿದ್ದನು. ಆಗ ಯಾವನೋ ಒಬ್ಬ ಬಾಯಿ ತುರಿಕೆಯುವನಿಂದ ತಾನು ಹೆಚ್ಚು ನಾನು ಹೆಚ್ಚು ಎಂಬ ತಗಾದೆ ಶುರುವಾಗಿ, ಆದರಿಂದ ಬೇರೆ ಬೇರೆ ತರಗತಿಯವರ ಮಧ್ಯೆ ಭೇದಭಾವ ಉಂಟಾಯಿತು. ಕಲಹ ಜೋರಾಗಿ ಕೊಲೆಗಳು ಬಿದ್ದು ದೇಶದೊಳಗೆಲ್ಲಾ ಅರಾಜಕ ಪರಿಸ್ಥಿತಿಯುಂಟಾಯಿತು. ಬೇರೆ ಬೇರೆ ಮತಗಳ ಜನರೂ, ವೃತ್ತಿಗಳ ಜನರೂ, ಕುಲಗಳ ಜನರೂ ತಮ್ಮ ತಮ್ಮ ಕರ್ತವ್ಯಗಳನ್ನು ಬಿಟ್ಟು ಯುದ್ಧಕ್ಕೆ ಇಳಿದವರಂತೆ ಆಗಿಬಿಟ್ಟರು. ರಾಜನು ಭಟರ ಮೂಲಕ ಎಷ್ಟು ತಡೆಯಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಎಲ್ಲಿ ನೋಡಿದರೂ ಹಾಹಾಹಾಕಾರಗಳೆದ್ದು ಶಾಂತಿ ತಪ್ಪಿತು.

ಕಡೆಗೆ ರಾಜನು ಈ ದುಷ್ಟ ಪರಿಸ್ಥಿತಿಯನ್ನು ನಿವಾರಿಸಲು ಏನೇನೋ ಶಾಸನಗಳನ್ನು ಅಮಲು ಪಡಿಸಿದನು. ಆದರೆ ಆ ಶಾಸನಗಳ ಆಧಾರದಿಂದಲೇ ಪ್ರಜೆಗಳು ಮತ್ತಿಷ್ಟು ಅಂತಃ ಕಲಹಗಳಲ್ಲಿ ತೊಡಗಿ ನ್ಯಾಯವಾದಿಗಳಿಗೂ ನ್ಯಾಯಾಸ್ಥಾನಗಳಿಗೂ ತಲೆನೋವನ್ನುಂಟುಮಾಡುತ್ತ, ರಕ್ಷಕಭಟರಿಗೆ ಹೆಚ್ಚಿನ ಕಿರುಕುಳ ಕೊಡುತ್ತ ಇರುವುದನ್ನು ನೋಡಿ ರಾಜನಿಗೆ ಏನೂ ತೋರದಂತಾಯಿತು.

ರಾಜನು ತನ್ನ ಅಸಮರ್ಥತೆಯನ್ನು ತಿಳಿದು ಮಂತ್ರಿಯೂ, ಪುರೋಹಿತನೂ ಆದ ಯಜ್ಞಶರ್ಮನೊಂದಿಗೆ, "ನಮ್ಮ ಪ್ರಜೆಗಳ ಜೀವಿತವು ಹೀಗೆ ಕಂಟಕಪ್ರಾಯವಾಯಿತೇಕೆ? ಈ ಪರಿಸ್ಥಿತಿಯಲ್ಲಿ ಸರಿಯಾದ ಪರಿಪಾಲನೆ ಸಾಗಿಸಬೇಕಾದರೆ ಏನು ಮಾಡಬೇಕು? ಅಸಲು ಕಾರಣವೇನಿರಬಹುದು? ತಪ್ಪು ಎಲ್ಲಿದೆ?" ಎಂದು ಕೇಳಿದನು.

ಅದಕ್ಕೆ ಯಜ್ಞಶರ್ಮನು, "ರಾಜಾ, ನಿನ್ನ ಅನುಮಾನ ತೀರಬೇಕಾದರೆ, ಒಂದು ಚಿಕ್ಕ ಇತಿಹಾಸವನ್ನು ಹೇಳುತ್ತೇನೆ. ಅದನ್ನು ಕೇಳಿ ಆಲೋಚನೆ ಮಾಡಿದರೆ ದೇಶದ ಕೆಟ್ಟ ಪರಿಸ್ಥಿತಿಗೆ ಕಾರಣವೇನೆಂದು ನಿನಗೇ ಗೊತ್ತಾಗಬಹುದು" ಎಂದು ಈ ರೀತಿಯಾಗಿ ಹೇಳಿದನು :

ಪಾತಾಳ ಲೋಕದಲ್ಲಿ ರಾಕ್ಷಸ ರಾಜ್ಯವು ಬಹಳ ಸುಭಿಕ್ಷವಾಗಿದ್ದಿತು. ಹಾಗಿರುವಾಗ ಅಘೋರನೆಂಬ ರಾಕ್ಷಸನು ರಾಜನಿಗೆ ಕೆಟ್ಟ ಹೆಸರು ಬರುವಂತೆ ಮಾಡಿ ತಾನೇ ರಾಜನಾಗಬೇಕೆಂಬ ದುರುದ್ದೇಶದಿಂದ ಪ್ರಜೆ

"ವಸುಂಧರ"



ಗಳೊಂದಿಗೆ ರಾಜನ ಮೇಲೆ ಇಲ್ಲದ್ದು ಹುಟ್ಟಿಸಿ ಚಾಡಿ ಹೇಳುತ್ತ, ಅವರಿವರೊಳಗೆ ಜಗಳದ ಗಂಟು ಹಾಕಿ, ಕಲಹವನ್ನೆಬ್ಬಿಸಿದನು. ಕೂಡಲೇ ಪಾತಾಳ ರಾಜನು ಅಘೋರನ ಸಮಾಚಾರ ತಿಳಿದು ಅವನನ್ನು ಪಾತಾಳ ಲೋಕದಿಂದಲೇ ಬಹಿಷ್ಕರಿಸಿ ಬಿಟ್ಟನು. ಅಲ್ಲಿಂದ ಹೊರದೂಡಲ್ಪಟ್ಟ ಅಘೋರನು ಭೂಮಿಗೆ ಬಂದನು. ಬಂದ ಕೂಡಲೇ ಭೂಮಿಯ ಮರಳುಗಾಡಿನ ಪ್ರದೇಶದಲ್ಲೇ ಕಾಲಿಟ್ಟನು. ಅಲ್ಲಿ ಅವನಿಗೆ ಯಾವ ತಿಂಡಿಯೂ ಸಿಕ್ಕದ್ದರಿಂದ, ಮನುಷ್ಯರಿರುವ ಪ್ರಾಂತಗಳಿಗೆ ಬಂದು, ಸಿಕ್ಕಿದ ಮನುಷ್ಯರನ್ನು ಮುರಿದು ತಿನ್ನಲು ತೊಡಗಿದನು. ನರ ಮಾಂಸದ ರುಚಿ ಅವನಿಗೆ ತುಂಬ ಚೆನ್ನಾಗಿ ಹಿಡಿಸಿತು.

ಅವನ ಕಾಟದಿಂದ ಭೂಲೋಕದಲ್ಲಿ ದೊಡ್ಡ ಸಂಚಲನ ಉಂಟಾಯಿತು. ಅಘೋರನು ಯಾವಾಗ ಯಾವ ಪ್ರಾಂತದ ಮೇಲೆ ಬೀಳುವನೆಂದು ಯಾರಿಗೂ ತಿಳಿಯದು. ಯಾವ ಕ್ಷಣದಲ್ಲಿ ಯಾರಿಗೆ ಸಾವು ಬರುತ್ತದೋ ಹೇಳಲಾಗದು. ಇದ್ದುದರಲ್ಲಿ ಧಪ್ಪದ ಮನುಷ್ಯರನ್ನೇ ಮೊದಲು ತಿನ್ನುವನು. ಅಂತೆಯೇ ದಪ್ಪದವರು ಹೆದರಿ ಸಾಯುತ್ತಿದ್ದರು. ಹೊರಗೆ ಸುಳಿದಾಡಲು ಹೆದರಿ ಮನೆಯೊಳಗೇ ಕುಳಿತು ಇನ್ನಷ್ಟು ದಪ್ಪವಾಗುತ್ತಿದ್ದರು.

ಭೂಲೋಕದಲ್ಲಿ ಅನೇಕ ದೇಶಗಳಿವೆ. ಅನೇಕ ಭಾಷೆಗಳಿವೆ. ಒಂದೊಂದು ಭಾಷೆಯವರೂ ತಮ್ಮ ಭಾಷೆಯೇ ಹೆಚ್ಚಿನದು ಎನ್ನುವರು. ಒಂದು ದೇಶದ ಹೆಚ್ಚಳ ಇನ್ನೊಂದು ದೇಶಕ್ಕೆ ಸಹಿಸಲಾಗದು. ಇದರಿಂದಾಗಿ ಪ್ರತಿ ದೇಶವೂ ಇತರ ದೇಶಗಳನ್ನು ಜಯಿಸಿ ಅವುಗಳ ಮೇಲೆ ಒಡೆತನ ನಡೆಸಬೇಕೆಂದು ನೋಡುತ್ತಿದ್ದಿತು. ಆದುದರಿಂದ ಆಗಾಗ ಯುದ್ಧಗಳೂ ನಡೆಯುತ್ತಿದ್ದುವು. ಅದರಲ್ಲಿ ಗೆಲ್ಲಲಿಕ್ಕಾಗಿ ಹೊಸ ಹೊಸ ಮಾರಣಾಯುಧಗಳನ್ನು ತಯಾರಿಸಿಕೊಂಡಿದ್ದರು. ಹೊಸದಾಗಿ ಒಂದಕ್ಕಿಂತ ಒಂದು ಕ್ರೂರವಾದುದನ್ನು ಕಂಡುಹಿಡಿಯುತ್ತಲೂ ಇದ್ದರು. ಈ ಹಾಳು ಬಗೆಯ ಮೇಲಾಟವು ತೀವ್ರವಾಯಿತು.

ಅಘೋರನು ಭೂಲೋಕಕ್ಕೆ ಬಂದ ಪ್ರಾರಂಭ ದಿನಗಳಲ್ಲಿ ಅನೇಕಮಂದಿ ವೀರರು ಮುಂದೆ ಬಂದು, ತಮ್ಮ ತಮ್ಮ ದೇಶಗಳನ್ನು ಅವನಿಂದ ಕಾಪಾಡಲು ಪ್ರಯತ್ನಪಟ್ಟರು. ಆದರೆ ತಾಳೇ ಮರದ ಪ್ರಮಾಣದಷ್ಟಿರುವ ಅಘೋರನ ಮಹಾ ಶರೀರವನ್ನು ಮಾನವರ ಆಯುಧಗಳಾವುದುದರಿಂದಲೂ ಗಾಯಪಡಿಸಲಾಗಲಿಲ್ಲ. ಅವನು ಎಂತೆಂತಹ ಮಾರಣಾಯುಧಗಳನ್ನೂ ಲಕ್ಷ್ಯಮಾಡದೆ ಸ್ವೇಚ್ಛೆಯಾಗಿ ತಿರುಗಿಕೊಂಡೇ, ತನ್ನ ನರಭಕ್ಷಣ ನಡೆಸಿಕೊಂಡೇ ಇದ್ದನು. ಮನುಷ್ಯರಿಗೆ ದೊಡ್ಡ ಭಯವೇ ಹಿಡಿಯಿತು.

ವ್ಯಕ್ತಿಗಳ ಶೌರ್ಯ ಪರಾಕ್ರಮಗಳು ರಾಕ್ಷಸನನ್ನು ಏನೂ ಮಾಡಲಾರವೆಂದು, ಎಲ್ಲಾ ದೇಶದ ಪ್ರಜೆಗಳಿಗೂ ಅವನಿಂದ ಅಪಾಯವೇ ಎಂದು, ಎಲ್ಲರಿಗೂ ಸ್ಪಷ್ಟವಾಯಿತು. ಆಗ ಎಲ್ಲಾ ದೇಶದ ರಾಜರೂ

ಒಂದಾಗಿ ಸಮಾವೇಶಗೊಂಡು, ರಾಕ್ಷಸ ನಾಶನವನ್ನು ಕುರಿತು ಚರ್ಚೆ ಮಾಡಿದರು. ಎಲ್ಲರಿಗಿಂತ ಹೆಚ್ಚು ಅನುಭವಶಾಲಿಯಾದ ಒಬ್ಬ ರಾಜನು ಹೀಗೆಂದನು :

"ಲಕ್ಷಗಟ್ಲೆ ಇರುವೆಗಳು ಕೂಡಿ ಒಂದು ಹಾವನ್ನು ಕೊಂದುಬಿಡುತ್ತವೆ. ಹುಲ್ಲುಗಳನ್ನು ಜೋಡಿಸಿ ಹೆಣೆದು ಹಗ್ಗ ಮಾಡಿದರೆ ಮದಗಜವನ್ನಾದರೂ ಕಟ್ಟಲು ಸಾಧ್ಯವಿದೆ. ಐಕಮತ್ಯಕ್ಕಿಂತ ಹೆಚ್ಚಿನ ಶಕ್ತಿ ಪ್ರಪಂಚದಲ್ಲಿ ಬೇರೊಂದಿಲ್ಲ. ಭೂಮಿಯ ಮೇಲಿದ್ದ ಎಲ್ಲಾ ಮನುಷ್ಯರೂ ಧೈರ್ಯವನ್ನು ಬಿಡದೆ ಒಂದಾಗಿ ಸೇರಿ ಆ ರಾಕ್ಷಸನನ್ನು ಇದಿರಿಸಿದರೆ ಅವನನ್ನು ನಾಶ ಮಾಡುವುದು ಸುಲಭ."

ಇದಕ್ಕಿಂತ ಸಮಂಜಸವಾದ ಆಲೋಚನೆ ಇಲ್ಲವೆಂದು ಎಲ್ಲರೂ ಒಮ್ಮನಸ್ಸಿನಿಂದ ಒಪ್ಪಿಕೊಂಡರು. ಆ ಮೇಲೆ ಅಘೋರನನ್ನು ಇದಿರಿಸಿಕೊಳ್ಳಲು, ಮರುದಿನವೇ ಎಲ್ಲಾ ಪ್ರಜೆಗಳೂ ಒಂದು ಸ್ಥಳದಲ್ಲಿ ಕೂಡ ತೊಡಗಿದರು. ನೂರು, ಸಾವಿರಗಳಿಂದ ಪ್ರಾರಂಭವಾಗಿ ಜನ ಸಮೂಹವು ಲಕ್ಷಗಳಾಗಿ ಕೋಟಿಗಳಷ್ಟಾದರು.

ಈ ಮಹಾ ಸೈನ್ಯವು ಎರಡು ದಿನಗಳಲ್ಲಿ ಅಘೋರನನ್ನು ತಲಪಿ ಅವನ ಮೇಲೆ ಮುಗಿಬಿದ್ದುವು. ರಾಕ್ಷಸನಿಗೂ ಜನ ಸಮೂಹಕ್ಕೂ ಯುದ್ಧವು ಪ್ರಾರಂಭವಾಯಿತು. ಅವನ ಬೃಹದಾಕಾರವನ್ನು ನೋಡಿ, ಅಥವಾ ಅವನ ಕಾಲ ಕೆಳಗೆ ನಜುಗುಜ್ಜಾಗಿ ಸಾಯುವೆವೆಂದು ಯಾರೂ ಭಯಪಡಲಿಲ್ಲ. ಅಘೋರನ ಮಹಾಕಾಯದ ಮೇಲೆ ಆಪಾದಮಸ್ತಕವಾಗಿ ಮನುಷ್ಯರು ಮುತ್ತಿಕೊಂಡು ಹೊಡೆದು ಚಚ್ಚ ತೊಡಗಿದರು.

ಆ ಮಹಾರಾಕ್ಷಸನು ತನ್ನ ಜೀವಿತ ಕಾಲದಲ್ಲಿ ಮೊದಲನೇಸಾರಿಯಾಗಿ ಭಯವೆಂದರೇನೆಂಬುದನ್ನು ಈಗ ತಾನೇ ತಿಳಿದುಕೊಂಡನು. ಇಷ್ಟೊಂದು ಜನರ ಪೆಟ್ಟುಗಳಿಗೆ ತನ್ನ ವಜ್ರ ಶರೀರವು ಕೂಡಾ ತಡೆದುಕೊಳ್ಳಲಾರದೆಂದು ಅವನಿಗೆ ತಿಳಿದುಹೋಯಿತು. ಆ ಮೇಲೆ ಅವನು ಜನರನ್ನು ಇದಿರಿಸಿ ಹೊಡೆಯುವ ಆಲೋಚನೆಯನ್ನು ಬಿಟ್ಟು ಕೊಟ್ಟು ಓಡ ತೊಡಗಿದನು. ಓಡುವ ರಾಕ್ಷಸನ ಕಾಲಿನ ಕೆಳಗೆ ಸಿಕ್ಕಿ ಎಷ್ಟೋ





ಜನರು ಸತ್ತರು. ಅವನ ಶರೀರದ ಮೇಲೆಲ್ಲಾ ಏರಿ ಕೊಂಡವರು ಕೆಳಗೆ ಧುಮುಕಿ ಕೈಕಾಲು ಮುರಿದು ಕೊಂಡರು. ಅಂತೂ ಪ್ರಜೆಗಳಿಗೆ ರಾಕ್ಷಸನ ಪೀಡೆ ಹೋಯಿತು.

ಆ ಮೇಲೆ ಕೂಡಾ ಅಘೋರನು ಮನುಷ್ಯರನ್ನು ಹಿಡಿದು ತಿನ್ನಲು ಎರಡು ಮೂರು ಸಾರಿ ಬಂದು ಇದಿರಿಸುವ ಪ್ರಯತ್ನಮಾಡಿ, ಘೋರವಾಗಿ ಪೆಟ್ಟು ತಿಂದು ಜೀವ ಉಳಿಸಿಕೊಂಡು ಓಡಿಹೋದನು. ಆ ಮೇಲೆ ಅವನು ಮನುಷ್ಯರ ಹಂಬಲ ಬಿಟ್ಟು ಅರಣ್ಯದೊಳಗೇ ಇದ್ದು ಅಲ್ಲಿಯ ಮೃಗಗಳನ್ನು ಹಿಡಿದುಕೊಂಡು ತಿನ್ನ ತೊಡಗಿದನು. ಕಾಡಿನಲ್ಲಿರುವ ಮೃಗಗಳೂ ಖಾಲಿಯಾಗುವ ಪರಿಸ್ಥಿತಿಯುಂಟಾಯಿತು.

ಆದರೆ ಅಘೋರನಿಗೆ ನರಮಾಂಸದ ಮೇಲಿನ ಭ್ರಾಂತಿ ಆಗಾಗ ಕೆರಳುತಿತ್ತು. ಅದರ ರುಚಿ ಮರೆಯಲಾಗಲಿಲ್ಲ ಅವನಿಗೆ. ಅಕಸ್ಮಾತ್ತಾಗಿ ಅವನಿಗೆ ಕಾಡಿನಲ್ಲಿ ಒಬ್ಬಳು ಮನುಷ್ಯ ಹೆಂಗುಸು ಕಣ್ಣಿಗೆ ಬಿದ್ದಳು. ಹಿಡಿದು ತಿನ್ನುವ ಉದ್ದೇಶದಲ್ಲಿ ಅವಳನ್ನು ಹಿಡಿದನು. ಆಗ ಅವಳು ರಾಕ್ಷಸಿಯಾಗಿ ನಿಂತುದನ್ನು ನೋಡಿ ಅತ್ಯಾಶ್ಚರ್ಯಪಟ್ಟನು. ಪಾತಾಳ ಲೋಕದಲ್ಲಿದ್ದ ಅವನ ಪರಿಚಯದ ರಾಕ್ಷಸಿಯೇ ಅವಳು. ಅವಳ ಹೆಸರು ಅಘೋರಿಕೆ.

ಅವಳು ಅಘೋರನನ್ನು ನೋಡಿ ಹೀಗೆಂದಳು : "ನೀನು ಹೊರಟುಹೋದ ಮೇಲೆ ಪಾತಾಳ ಲೋಕವೇ ಸಪ್ಪಗಾದಂತೆ ನನಗೆ ತೋರಿತು. ಆದುದರಿಂದ ನಿನ್ನನ್ನು ಹುಡುಕುತ್ತಾ ಹೀಗೆ ಬಂದೆ. ಯಾವುದಕ್ಕೂ ಒಳ್ಳೆಯದು ಅಂತ ಮನುಷ್ಯ ರೂಪದಲ್ಲೇ ಹೀಗಿದ್ದೇನೆ."

ಅಘೋರನು ಅವಳೊಂದಿಗೆ ತನ್ನ ಭೂಲೋಕದ ಅನುಭವಗಳನ್ನೆಲ್ಲಾ ಹೇಳಿದನು. ಅದನ್ನೆಲ್ಲಾ ಕೇಳಿ ಅಘೋರಿಕೆ ನಕ್ಕು, "ಮನುಷ್ಯರ ಸಂಗತಿ ನಿನಗೆ ಸರಿಯಾಗಿ ಗೊತ್ತಾಗಲಿಲ್ಲ. ಮನುಷ್ಯರು ಬಲಿಷ್ಠರಲ್ಲದೇ ಹೋದರೂ ಬುದ್ಧಿ ಬಲ ತುಂಬಾ ಉಳ್ಳವರು. ಅವರನ್ನು ಇದಿರಿಸಬೇಕಾದರೆ ನಮ್ಮ ದೇಹಶಕ್ತಿ ಪ್ರಯೋಜನವಿಲ್ಲ. ಬುದ್ಧಿಯಿಂದಲೇ ಇದಿರಿಸಬೇಕು. ನಾವು ಅವರ ನಡುವೆ ಅವರ ರೂಪದಲ್ಲೇ ವಾಸ ಮಾಡಬೇಕು. ಅವರನ್ನು ಸಮಯ ಸಂದರ್ಭಕ್ಕೆ ತಕ್ಕ ಹಾಗೆ ಮೋಸಪಡಿಸುತ್ತಾ ಇರಬೇಕು. ಆಗ ನಮ್ಮ ಬದುಕು ಪಾತಾಳ ಲೋಕಕ್ಕಿಂತಲೂ ಚೆನ್ನಾಗಿರುತ್ತದೆ." ಎಂದಳು.

ಆ ಮೇಲೆ ಆ ರಾಕ್ಷಸರಿಬ್ಬರೂ ಮಾನವ ರೂಪ ಧರಿಸಿ ಮಾನವರ ಮಧ್ಯದಲ್ಲಿ ಜೀವಿಸ ತೊಡಗಿದರು. ಮನುಷ್ಯರಿಗೆ ಬುದ್ಧಿವಂತಿಕೆ ಹೆಚ್ಚಾಗಿರುವುದಾದರೂ ಅದಕ್ಕಿಂತ ಹೆಚ್ಚಾಗಿ ಸ್ವಾರ್ಥಪರರಾಗಿರುವರೆಂಬುದು ಆ ರಾಕ್ಷಸರಿಗೆ ಗೊತ್ತಾಯಿತು. ಅವರು ಮನುಷ್ಯರ ಸ್ವಾರ್ಥವನ್ನು ಅವಕಾಶಪಡಿಸಿಕೊಂಡು ಮನುಷ್ಯರಲ್ಲಿ ಒಬ್ಬರ ಮೇಲೆ ಒಬ್ಬರಿಗೆ ಜಗಳ ಬರುವಂತೆ

ಮಾಡ ತೊಡಗಿದರು. ಮತ್ತೆ ಪ್ರಜೆಗಳೊಳಗೆ ಎಲ್ಲಾ ಬಗೆಯ ಭೇದಭಾವನೆಗಳೂ ಬಂದು ಭೂತಾಕಾರ ವಾದುವು. ಜಾತಿಭೇದ, ಕುಲಭೇಧ, ಮತಭೇದ ಇತ್ಯಾದಿ! ಮಾನವರ ಮಧ್ಯದಲ್ಲಿ ಯಾವಾಗಲೂ ಜಗ ಳಾಟವೇ ಆಯಿತು. ಅಘೋರನೂ ಅಘೋರಿಕೆಯೂ ಆ ಜಗಳದಲ್ಲಿ ತಮಗೆ ಬೇಕಾದ ಮನುಷ್ಯರನ್ನು ಎತ್ತಿಕೊಂಡು ಹೋಗಿ ತಿಂದುಬಿಡುತ್ತಿದ್ದರು. ಈ ಅಪಹರಣದಿಂದ ಮನುಷ್ಯರು ಒಬ್ಬರನ್ನೊಬ್ಬರು ಅನುಮಾನಿಸಿಕೊಂಡು ಇನ್ನಷ್ಟು ಹೆಚ್ಚು ಜಗಳ ಮಾಡುತ್ತಿದ್ದರೇ ಹೊರತು, ತಮ್ಮ ನಡುವಿನಲ್ಲಿರುವ ರಾಕ್ಷಸರನ್ನು ಅನುಮಾನಿಸಲಾರದೆ ಹೋದರು.

ಈಗ ಆ ರಾಕ್ಷಸರ ಜೀವಿತವು ಚೆನ್ನಾಗಿ ಸಾಗ ತೊಡಗಿತು. ಅವರು ಭೂಲೋಕದಲ್ಲಿ ಶಾಶ್ವತ ವಾಗಿರಲು ತೀರ್ಮಾನಿಸಿಕೊಂಡರು. ಆ ರಾಕ್ಷಸರ ಸಂತತಿಯವರು ಕ್ರಮವಾಗಿ ಪ್ರಪಂಚದ ಎಲ್ಲಾ ಮೂಲೆಗಳಿಗೂ ವಿಸ್ತರಿಸಿಕೊಂಡರು. ಅವರು ತಮ್ಮ ಸಂತತಿಯವರಿಗೆ ಹೀಗೆ ಹಿತಬೋಧೆಮಾಡುತ್ತಿದ್ದರು:

"ಎಚ್ಚರಿಕೆ! ನೀವು ರಾಕ್ಷಸರೆಂದು ತಿಳಿದರೆ ಮನುಷ್ಯರೆಲ್ಲಾ ಒಗ್ಗಟ್ಟಾಗಿ ಹೋಗುತ್ತಾರೆ. ಮನುಷ್ಯ ರೂಪದಲ್ಲಿರುವ ರಾಕ್ಷಸರನ್ನಾದರೆ ಅವರು ತುಂಬಾ ಆದರಿಸುತ್ತಾರೆ. ಅದೇ ನಮಗೆ ಕ್ಷೇಮ." ಅಘೋರನ ಸಂತತಿಯವರು ಈಗ ಎಲ್ಲಾ ಕುಲ ಗಳಲ್ಲಿಯೂ, ಮತಗಳಲ್ಲಿಯೂ, ಭಾಷೆಗಳಲ್ಲಿಯೂ, ದೇಶಗಳಲ್ಲಿಯೂ ಇದ್ದು, ಮನುಷ್ಯರು ಒಗ್ಗಟ್ಟಾಗದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರುವವರು. ಅವರ ನಿಜ ಸ್ವರೂಪವನ್ನು ಹೊರಗೆ ಹಾಕಿ, ಮನುಷ್ಯರ ಮಧ್ಯದಿಂದ ಅವರನ್ನು ಓಡಿಸುವವರೆಗೂ ಭೂಮಿಯ ಮೇಲೆ ಶಾಶ್ವತವಾದ ಶಾಂತಿ ನೆಲೆಸಲಾರದು.

ಹೀಗೆ ಯಜ್ಞಶರ್ಮನು ಕಥೆಯನ್ನು ಮುಗಿಸಿ, "ರಾಜಾ, ಪ್ರಜೆಗಳು ಯಾವಾಗಲೂ ಶಾಂತಿ ಜೀವನ ವನ್ನೇ ಬಯಸುತ್ತಾರೆ. ಅವರು ಹೋರಾಟಕ್ಕೆ ಇಳಿದರೆಂದರೆ, ಅವರನ್ನು ಹಾಗೆ ಹುರಿಗೊಳಿಸುವ ಶಕ್ತಿ ಅವರ ನಡುವಿನಲ್ಲಿಯೇ ಇರುತ್ತವೆ. ಅರಾಜಕ ಪರಿಸ್ಥಿತಿಯಿಂದ ಲಾಭ ಹೊಂದುವವರು ಯಾರೆಂಬು ದನ್ನು ತಿಳಿದುಕೊಂಡು ಅವರು ಎಷ್ಟೇ ಸನ್ನಿಹಿತ ರಾದರೂ, ಸಂಭಾವಿತರಾದರೂ, ಗೌರವಸ್ಥರಾದರೂ ಸಂಕೋಚಪಡದೆ ದಂಡಿಸಿದ ಪಕ್ಷದಲ್ಲಿ ಮಾಯಾ ರೂಪದಲ್ಲಿ ಪ್ರಜೆಗಳ ರಕ್ತ ಹೀರುವ ರಾಕ್ಷಸ ಸಂತತಿ ನಾಶವಾಗಿ ಬೇಗದಲ್ಲೇ ದೇಶವು ಸುಭಿಕ್ಷವಾಗಿ ಶಾಂತಿ ಕ್ಷೇಮಗಳು ನೆಲೆಸುತ್ತವೆ" ಎಂದನು.

ಶಕ್ತಿಸೇನನು ತನ್ನ ವೃದ್ಧ ಮಂತ್ರಿಯ ಆಂತರ್ಯ ವನ್ನು ಅರಿತು ತನ್ನ ರಾಜ್ಯದಲ್ಲಿರುವ ಪ್ರಚ್ಛನ್ನ ರಾಕ್ಷಸರನ್ನು ಶೋಧಿಸಿ ಹಿಡಿದು, ಮಗಧ ರಾಜ್ಯದ ಕ್ಷೇಮವನ್ನು ಕಾಪಾಡಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೧ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Brahmdev

★



D. N. Shirke

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ನವೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬.

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಈ ಹಳ್ಳಿ ಇಲಿಯಾಗಿದ್ದರೆ...**

ಎರಡನೇ ಫೋಟೋ: **ನನ್ ಹಳ್ಳಿಗೆ ಎಷ್ಟು ಚೆನ್ನಿತ್ತು!**

ಕಳುಹಿಸಿದವರು: **ಡಿ. ಕೆ. ಶೇಟ್,**

ಪಿ. ಡಿ. ಆಫೀಸ್, ಕಾರವಾರ - ೫೮೧೩೦೧

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ರುಚಿ ಮತ್ತು ಸ್ವಾದಗಳ ಹರ್ಷಕರ ವೈಚಿತ್ರ್ಯವಾಗಿರುವ-ಹೊಸ

# ನ್ಯೂಟ್ರೈನ್

## ಮಾರ್ವೆಲ್ ರೇಂಜ್




**ಪ್ರತಿನಿತ್ಯವು ಮಿಠಾಯಿ-**
**ರಸದೌತಣ ನಂಬಾಯಿ!**

ನ್ಯೂಟ್ರಿನ್ ಕನ್‌ಫೆಕ್ಷನರಿ
ಕಂಪನಿ ಲಿಮಿಟೆಡ್,
ಚಿತ್ತೂರು–517 002
(ಆಂಧ್ರ ಪ್ರದೇಶ್)

ನಮ್ಮ ಮಿಂಟ್, ಜಿಂಜರ್, ಫ್ರೂಟ್, ಹನೀ ಮತ್ತು ಕಾರ್ಡಮಮ್‌ಗಳನ್ನು ಸವಿದುನೋಡಿ.

CAS NC 48/80 KN B

CHANDAMAMA (Kannada) NOVEMBER 1980 Regd. No. M. 5210

# ನಿಮ್ಮ ನೆಚ್ಚಿನ ಬಿಸ್ಕಿಟ್‌ಗಳ ನಕಲು ಮಾಡುವವರನ್ನು ಹಿಡಿಯುವುದು ಒಂದು ಮಕ್ಕಳಾಟ

ಪಾರ್ಲೆ

**ಅಕ್ಷರ ಸಂಯೋಜನೆ ಪರೀಕ್ಷಿಸಿರಿ P-A-R-L-E**

ನಮ್ಮನ್ನು ನಕಲು ಮಾಡುವವರು P-A-R-L-E ಶಬ್ದದ ಸಂಯೋಜನೆಯಲ್ಲೇ ಮೋಸಗೊಳಿಸುತ್ತಾರೆ. ಹೀಗೆ: P-E-R-L-E ಅಥವಾ P-E-A-R-L ಇದಲ್ಲದೆ G-L-U-C-O ಶಬ್ದವನ್ನು G-L-U-C-O-S-E ಎಂದು ಬರೆಯುತ್ತಾರೆ.

**ಯಾವಾಗಲೂ ನೆನಪಿನಲ್ಲಿಡಿರಿ**

ಪಾರ್ಲೆ ಮೊನಕೊ ಮತ್ತು ಕ್ರಾಕ್‌ಜಾಕ್ ಬಿಸ್ಕಿಟ್‌ಗಳು ಬಿಡಿಬಿಡಿಯಾಗಿ ಎಂದೂ ಮಾರಲ್ಪಡುವುದಿಲ್ಲ. ಫ್ಯಾಕ್ಟರಿಯಲ್ಲಿ ಸೀಲ್‌ಗೊಂಡ ವಾತಾನುರೋಧಿ ಪ್ಯಾಕ್‌ನಲ್ಲಿ ದೊರೆಯುತ್ತವೆ. ಇಂಥವು ವಿಶ್ವಾಸಾರ್ಹವಾಗಿರುತ್ತವೆ.

ಪಾರ್ಲೆ ಗ್ಲುಕೋ ಬಿಸ್ಕಿಟ್‌ಗಳು ಮಾತ್ರ ಪ್ಯಾಕ್‌ನಲ್ಲಿಯೂ, ಬಿಡಿಬಿಡಿಯಾಗಿಯೂ ಮಾರಲ್ಪಡುತ್ತವೆ. ಇವನ್ನು ಬಿಡಿಯಾಗಿ ಕೊಳ್ಳುವಾಗ PARLE GLUCO ಬಿಸ್ಕಿಟ್ ಮೇಲಿದ್ದ ಅಕ್ಷರ ಸಂಯೋಜನೆಯನ್ನು ಪರೀಕ್ಷಿಸಿರಿ.

**ತಿಂದು ನೋಡಿರಿ**

ಕೊನೆಯದಾಗಿ ರುಚಿಯು ನಿಮಗೆ ಸತ್ಯ ಸಂಗತಿಯನ್ನು ಹೇಳುತ್ತದೆ. ನಮ್ಮನ್ನು ನಕಲು ಮಾಡುವವರು ಎಷ್ಟೇ ಪ್ರಯತ್ನಿಸಿ ನಮ್ಮ ಬಿಸ್ಕಿಟ್‌ನ ಹೊರ ಆಕಾರವನ್ನು ನಕಲು ಮಾಡಿದರೂ ಪಾರ್ಲೆಯ ರುಚಿ ಹಾಗೂ ಉತ್ತಮಿಕೆಯನ್ನು ಅವರು ನಕಲು ಮಾಡಲಾರರು.



ವರ್ಲ್ಡ್ ಸಿಲೆಕ್ಷನ್ ಅವಾರ್ಡ್‌ನ ವಿಜಯಿ




**ತಮ್ಮ ತಮ್ಮ ಕ್ಷೇತ್ರಗಳಲ್ಲಿ, ಭಾರತದಲ್ಲೇ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್‌ಗಳು.**
**ಮೈಸುಟ್ಟುಕೊಂಡರೆ ನರಿಯು ಹುಲಿಯಾದೀತೇ; ನಕಲು ಬಿಸ್ಕಿಟ್ ಪಾರ್ಲೆಯಾದೀತೇ!**

**ಪಾರ್ಲೆ ಗ್ಲುಕೋ ಪಾರ್ಲೆ ಮೊನೆಕೊ ಪಾರ್ಲೆ ಕ್ರಾಕ್‌ಜಾಕ್**

everest/80/PP/340-kn